# ಕರ್ಮವೀರ

ಜನಪ್ರಿಯ ಸಚಿತ್ರ ವಾರಪತ್ರಿಕೆ

ಜಗತ್ತಿನಲ್ಲಿ ಗೂಢವಾದೊಂದು ಶಕ್ತಿ ಇರುವುದು. ಅಣುರೇಣು ತೃಣಕಾಷ್ಠಗಳಲ್ಲಿ ಅದು ತುಂಬಿರುವುದು. ಕಣ್ಣಿಗೆ ಮಾತ್ರ ಕಾಣುವದಿಲ್ಲ. ಆದರೆ ಅದರ ಸುಳಿವು ನನಗೆ ಭಾಸವಾಗುವದೇನೋ ನಿಜ. ಅದೃಶ್ಯವಾಗಿರುವ ಈ ಶಕ್ತಿಯ ಅಸ್ತಿತ್ವವನ್ನು ನಾನು ಸಿದ್ಧಮಾಡಿ ತೋರಿಸಲಾರೆನು. ಯಾಕೆಂದರೆ ಇಂದ್ರಿಯಗಳಿಗೆ ಗೋಚರವಾಗುವಂಥ ಪದಾರ್ಥಗಳಿಂದ ಅದು ತೀರ ಭಿನ್ನವಾಗಿರುವುದು. ಅದನ್ನು ರೂಢವಾದ ದೃಷ್ಟಾಂತಗಳಿಂದ ಸಿದ್ಧಮಾಡಿತೋರಿಸಲು ಬರುವಂತಿಲ್ಲ. ಎಲ್ಲ ದೇಶಗಳಲ್ಲಿಯೂ ಕಾಲಗಳಲ್ಲಿಯೂ ಸಾಧುಸಂತರ ಹಾಗೂ ಮಹಾನುಭಾವರ ಪರಂಪರೆಯೊಂದು ಸಾಗಿಬಂದಿರುವುದು. ವಿಕ್ಷಿಪ್ತವಾಗಿ ತೋರುವ ಅವರ ನಡತೆ - ನಡೆವಳಿಯಿಂದಲೂ ಅವರು ಮಾಡಿತೋರಿಸಿದ ಅಗಾಧಲೀಲೆಗಳಿಂದಲೂ ಈ ಶಕ್ತಿಯ ಅಸ್ತಿತ್ವದ ಮನವರಿಕೆ ಆಗುವಂತಿದೆ. ಇದನ್ನು ನಾನು ಎದೆತಟ್ಟಿ ಹೇಳುತ್ತೇನೆ. ಕೂಳು ನೀರು ಇಲ್ಲದೆ ನಾನು ಹಲವು ಕಾಲ ಬದುಕಬಲ್ಲೆನು. ನೀವು ನನ್ನ ಕಣ್ಣು ಕೀಳಬಹುದು. ಅದರಿಂದ ನಾನೇನೂ ಸಾಯಲಾರೆನು. ನೀವು ನನ್ನ ಮೂಗು ಕೊಯ್ದು ಕೊಳ್ಳಬಹುದು. ಅದರಿಂದ ನನ್ನ ಜೀವಕ್ಕೆ ಅಪಾಯವಾಗಲರಿಯದು. ಆದರೆ, ಪರಮಾತ್ಮನಲ್ಲಿರುವ ನನ್ನ ವಿಶ್ವಾಸವನ್ನು ನೀವು ನಾಶಿಸಿಬಿಟ್ಟಲ್ಲಿ, ನಾನು ಅರಗಳಿಗೆಯಾದರೂ ಬದುಕಿರಲಾರೆನು.

— ಗಾಂಧೀಜಿ



## ವಿಜಾಪುರದ ಗೋಲುಗುಮ್ಮಟ

ವಿಜಾಪುರದ ಸುಪ್ರಸಿದ್ಧ ಗೋಲುಗುಮ್ಮಟದೊಳಗೆ ಪಿಸುಗುಟ್ಟಿದರೂ ಪಾರ ನಿಂತವನಿಗೆ ಸ್ಪಷ್ಟವಾಗಿ ಕೇಳಿಸುವದು. ಇದು ಮಧ್ಯಯುಗದ ಶಿಲ್ಪವಿಜ್ಞಾನದ ಆಶ್ಚರ್ಯಚೂಡಾಮಣಿಯೆನ್ನಬಹುದು. ಈ ಚಿತ್ರ ಆ ಕಟ್ಟಡದ ಅಪೂರ್ವವಾದೊಂದು ನೋಟ.

**ಭಾರತದ ಬಗ್ಗೆ ಪಾಶ್ಚಾತ್ಯರ ಕುಟಿಲ ನೀತಿ** — ಪುಟ ೧೧

**ಅದ್ವಿತೀಯ ಅಮೇರಿಕೆಯ ಅಜ್ಞಾತ ಭಯ** — ಪುಟ ೫



# ಯಕ್ಷಪ್ರಶ್ನೆ ಅಥವಾ ಬರಲಿರುವ ಸಮಾಜ*

ಲೇ — ಶ್ರೀ ಬಿ. ಎಚ್. ಶ್ರೀಧರ ಎಂ. ಎ.

ಆಧುನಿಕತೆಯ ಬಗ್ಗೆ ಇಂದಿನವರು ಬಹಳ ಮಾತಾಡುತ್ತಾರೆ. ಆ ಶಬ್ದದಲ್ಲೇ ಏನೋ ಒಂದು ಮಾಯೆಯಿದ್ದಂತೆ ತೋರುತ್ತದೆ. ಹಳೆಯ ಮರದ ಕೆಳಗೆ ಕುಳಿತು ಏನನ್ನು ಕುಡಿದರೂ ಮುಕ್ತವೇ ಎಂದು ತಿಳಿದಂತೆ ಆಧುನಿಕತೆಯ ಹೆಸರಿನಲ್ಲಿ ಏನು ನುಡಿದರೂ ವೈಜ್ಞಾನಿಕವೇ ಎಂದು ಇಂದು ಹಲವರು ತಿಳಿದಂತಿದೆ. ಪಾಶ್ಚಾತ್ಯರ ಅನುಕರಣವೊಂದಾದರೆ, ಜಾತಿ ಪದ್ಧತಿಯ ವಿರುದ್ಧವನ್ನು ಹೇಳಿಬಿಟ್ಟರೆ ಆಧುನಿಕರಾದೆವೆಂದು ತಿಳಿವ ಮಂದಿಯ ಸಂಖ್ಯೆ ಕಡಿಮೆಯಿಲ್ಲ. ಇಂಥವರೂ ಹಳೆಯ ತೆಕ್ಕೆಯ ಕಳವಳಿಸುವವರೂ ಶ್ರೀ ಶಂ. ಬಾ. ಜೋಶಿಯವರು ಇತ್ತೀಚೆಗೆ ಬರೆದು ಗೋಕರ್ಣದ ಪರ್ಣಕುಟಿ ಗ್ರಂಥಮಾಲೆಯ ಪ್ರಕಾಶನದಲ್ಲಿ ಹೊರಪಡಿಸಿದ 'ಯಕ್ಷ ಪ್ರಶ್ನೆ ಅಥವಾ ಬರಲಿರುವ ಸಮಾಜ' ಎಂಬ ಪುಸ್ತಕವನ್ನು ಅಗತ್ಯವಾಗಿ ಓದಬೇಕು. ಡಾ. ರವೀಂದ್ರನಾಥ ಠಾಕೂರರಂಥವರು ಕೂಡ ಇಂದಿನ ಪಾಶ್ಚಾತ್ಯಾಭ್ಯಾಸ ಮೋಹ ಮತ್ತು ಅದೇ ಆಧುನಿಕತೆ ಎಂಬ ಭ್ರಾಂತಿ ಇವಕ್ಕೆ ಹೇಸಿ 'ಆಧುನಿಕತೆಯು ಬೆಂಗಸರ ಪ್ಯಾಟುಗಳಲ್ಲಿಲ್ಲ' ಎಂದು ಮುಂತಾಗಿ ಕಠೋರ ಟೀಕೆ ಮಾಡಿದ್ದುಂಟು. ತದ್ವಿರುದ್ಧವಾಗಿ ಹರಿಜನೋದ್ಧಾರ ಪ್ರಶ್ನೆ ಪ್ರಶ್ನೆಯಾಗಿ ಕಾಣಿಸುವ ನ್ಯಾಯಸಮ್ಮತವೆಂದು ಜನಜನಿತವಾಗಿದ್ದರೂ ಅವರ ದೇವಾಲಯ ಪ್ರವೇಶವನ್ನು ವಿರೋಧಿಸುವ ಸನಾತನಪಕ್ಷ ಈಗಲೂ ಉಂಟು. ಈ ಧ್ರುವಾಂತರ ವ್ಯತ್ಯಾಸದ ಪ್ರತಿದ್ವಂದ್ವಿಗಳು ಸಮಾಜಕಂಟಕರಾಗಿರುವುದರಿಂದಲೇ ನಿಜವಾದ ಸುಧಾರಣೆ ನಮ್ಮ ಸಮಾಜದಲ್ಲಿ ಆಗಲು ಅಡಚಣೆಗಳುಂಟಾಗಿವೆ.

ಉಕ್ತ ಪುಸ್ತಕದಲ್ಲಿ ಶ್ರೀ ಶಂ. ಬಾ. ಅವರು, "ಬ್ರಾಹ್ಮಣ ದ್ವೇಷದ ಭೂತಕ್ಕೆ ಭೂಪತಾಕಿ ಆ ಸೈತಾನೀ ಪ್ರೇರಣೆಯಲ್ಲಿ ಸಾವಿರಾರು ನಿರಪರಾಧಿ ಜೀವಿಗಳ ಜೀವಿತ-ವಿತ್ತದ ಧ್ವಂಸ ಮಾಡಿಸಿದ್ದಾಯಿತು. ಈ ಬಗೆಯ ಅಸುರೀಕೃತ್ಯಗಳಿಂದ ಬ್ರಾಹ್ಮಣರನ್ನು ಬಗ್ಗಿಸಬಹುದೆಂದು ಯಾರಾದರೂ ಭಾವಿಸಿದ್ದರೆ ಅದು ಅವರ ಬುದ್ಧಿಹೀನತೆಯ ಸಾಕ್ಷಿ" ಎಂದೂ ಮುಂದೆ ಸಾಗಿ "ನಾನು ಬುದ್ಧಿವಂತ, ಗುಣಿಯೆಂದು ಅನೇಕ ಸ್ಥಳಗಳಿಗೆ ಆಸೆಪಡುವ ಅಥವಾ ಆ ಸ್ಥಳಗಳನ್ನು ಸಹಜವಾಗಿ ಆಕ್ರಮಿಸುತ್ತಿದ್ದ ಹಾರುವರುಂಟು. ಅಂತಹರಲ್ಲಿ ಕೆಲವರು ನಿರಾಶೆಯ ಮುಬ್ಬಿನಲ್ಲಿ ಆಡುವ ಮಾತುಗಳು ತಮಗೂ ರಾಷ್ಟ್ರಕ್ಕೂ ಯಾರಿಗೂ ಕಲ್ಯಾಣಕರವಾಗುವುದಿಲ್ಲ' ಎಂದೂ ಹೇಳಿರುವುದು ಅವರ ನಿತ್ಯನೂತನವಾದ ನ್ಯಾಯ ಪಕ್ಷಪಾತ ಬುದ್ಧಿಗೆ ಒಳ್ಳೆಯ ನಿದರ್ಶನವಾಗಿದೆ. ಇದೇ ಬುದ್ಧಿಯಿಂದ ಗ್ರಂಥಕರ್ತರು ಮೇಲೆ ಹೇಳಿದ ಗ್ರಂಥದಲ್ಲಿ ೧೧ ಪ್ರಕರಣಗಳಾಗಿ ಯಕ್ಷ ಪ್ರಶ್ನೆ; ಜಾತೀಯತೆಯ ಹಿನ್ನೆಲೆ; ರಾಷ್ಟ್ರೀಯ ಸೈನ್ಯವನ್ನು ನಿರ್ಮಾಣಮಾಡಬಲ್ಲೆವೆ? ನಮಗೆ ಬೇಕಾದುದು ಏನು ಜಾತಿಯೆ ಪ್ರಜಾಪ್ರಭುತ್ವವೆ? ಹಿಂದು ಎಂಬ ಸಮಾಜ ಇದೆಯೆ, ಆಗಬೇಕೆ? ಮುಸಲ್ಮಾನರ ತೊಡಕು; ಜ್ಞಾನ ಅಥವಾ ಹಿರಿಮೆ ಜನ್ಮವನ್ನವಲಂಬಿಸಿದೆಯೆ? ಹೆಣ್ಣಿನ ವ್ಯಕ್ತಿತ್ವ ವಿಕಾಸವು ತಾಯ್ತನದಲ್ಲಿದೆ; ಮದುವೆಗಳ ವಿಚಾರ; ಸಂಕ್ರಮಣ ಎಂಬ ವಿಷಯಗಳನ್ನು ಚರ್ಚಿಸಿ, ತರ್ಕಶುದ್ಧವೂ ವ್ಯವಹಾರ್ಯನ್ಯಾಯಬದ್ಧವೂ ನಿಜನಾಗರಿಕ ಧರ್ಮಲಕ್ಷಣಾನ್ವಿತವೂ ಆದ ನಿರ್ಣಯಗಳನ್ನು ಕೊಟ್ಟಿದ್ದಾರೆ.

ಯಕ್ಷಪ್ರಶ್ನೆ ಮುಂದಿನ ಪ್ರಬಂಧಗಳ ಪೀಠಿಕೆಯಂತಿದೆ. ಅದರ ಮೊದಲ ಪ್ರಶ್ನೆ 'ಭಾರತ ಸ್ವಾತಂತ್ರ್ಯವು ನಿಜವಾಗಿಯೂ ನಮ್ಮ ಗುರಿಯೇ? ಎಂಬುದು. ಇದು ರಾಜಕೀಯ ಪ್ರಶ್ನೆ; ಇದಲ್ಲದೆ ಜಾತಿ ಧರ್ಮಗಳಿಗೆ, ವಿವಾಹ ಲಿಂಗ ಭೇದಗಳಿಗೆ ಸಂಬಂಧಿಸಿದ ಪ್ರಶ್ನೆಗಳನ್ನು ಗ್ರಂಥಕರ್ತರು ಬೇರೆ ಬೇರೆ ಪ್ರಕರಣಗಳಲ್ಲಿ ಚರ್ಚಿಸಿ ಸಿದ್ಧಾಂತಿಸಿದ್ದಾರೆ.

## ಜಾತೀಯ ಸಮಸ್ಯೆ

'ಜಾತೀಯ ಸಮಸ್ಯೆಯ ಹಿನ್ನೆಲೆ'ಯನ್ನು ಕೊಡುವಾಗ ಸಂಕುಚಿತ ಧಾರ್ಮಿಕಭಾವನೆ, ಪಾಪ ಪವಿತ್ರರೆಂಬ ತಾರತಮ್ಯ, ರಾಜಕೀಯ ಪದಾಳಿಕೆ, ವಿಧಿಜನಿತ ಅಸ್ಪೃಶ್ಯತೆ, ಹರಿಗಿನ [illegible], ಸ್ವದೇಶ ಸ್ವಧರ್ಮಗಳ ಬಗ್ಗೆ ತಿರಸ್ಕಾರ, ಬ್ರಿಟಿಷ ನೀತಿ, ರಾಷ್ಟ್ರಹಿತದ ಅರಿವಿನ ಅಭಾವ, ಪರತಂತ್ರರಾಷ್ಟ್ರೀಯತೆ, ಧಾರ್ಮಿಕ ಅಂಧಶ್ರದ್ಧೆ, ಸುಧಾರಕಂಮನ್ಯರ ಅತಿರೇಕ ಇವುಗಳೆಲ್ಲವೂ ಕಾರಣವೆಂದು ಹೇಳಿ, ಅಲ್ಲಲ್ಲಿ ಅದಕ್ಕೆ ತಕ್ಕ ಐತಿಹಾಸಿಕ ದೃಷ್ಟಾಂತಗಳನ್ನು ಕೊಡಲಾಗಿದೆ. ಈ ವಿವಿಧ ದೋಷಗಳನ್ನು ಸರ್ವ ಜಾತಿಗಳಿಗೂ ಹಂಚಿ ನಿಷ್ಪಕ್ಷಪಾತಭಾವದಿಂದ ಅವನ್ನು ನಿರ್ಮೂಲ ಮಾಡಬೇಕೆಂದು ಪ್ರತಿಪಾದಿಸಿ, ಅಂತ್ಯದಲ್ಲಿ 'ಜಾತಿಯ ತೊಡಕು ಬಿಡಿಸದೆ ಈಗ ಬಂದ ಸ್ವಾತಂತ್ರ್ಯವು ನಮಗೆ ಉಳಿಯಲಾರದು' ಎಂಬ ಮಹಾವಾಕ್ಯದಿಂದ ಅಧ್ಯಾಯ ಮುಗಿದಿದೆ.

## ರಾಷ್ಟ್ರೀಯ ಸೈನ್ಯ ರಚನೆ

'ಸ್ವತಂತ್ರ ಭಾರತದ ರಕ್ಷಣೆಗೆ ಅಗತ್ಯವಾದ ರಾಷ್ಟ್ರೀಯ ಸೈನ್ಯವನ್ನು ನಾವು ನಿರ್ಮಾಣ ಮಾಡಬಲ್ಲೆವೆ?' ಎಂಬ ಪ್ರಶ್ನೆಯನ್ನು ಎತ್ತಿ ತರ್ಕಶುದ್ಧವಾಗಿ 'ಈಗ ಹಿಂದು-ಮುಸಲ್ಮಾನರ ಜಗಳಗಳಲ್ಲಿ ಬ್ರಿಟಿಶ ಸೈನಿಕರನ್ನು ತರುವ ಪ್ರಸಂಗವು ಬರುತ್ತಲಿದೆ' ಎಂದು ಸತ್ಯಸ್ಥಿತಿಗೆ ಕನ್ನಡಿ ಹಿಡಿಯಲಾಗಿದೆ. ಅದೇ ರೀತಿ ಯಾವ ವರ್ಗದ್ವಯದಲ್ಲಿ ಕಲಹ ಉತ್ಪನ್ನವಾದರೂ ಭಾರತವು ಪರಕೀಯ ಮಧ್ಯಸ್ಥರ ದಾರಿ ಕಾಯಬೇಕಾಗಬಹುದು. ಇಂಥ ಅನವಸ್ಥೆಗೆ ಜಾತ್ಯತೀತ ಭಾವನೆಯ ಪರಿಪೋಷಣೆಯೊಂದೇ ಸಿದ್ಧೌಷಧ. ಇದಕ್ಕೆ ಜಾತೀಯ ಸಂಘ ಸಂಸ್ಥೆಗಳನ್ನು ನಿರ್ಮೂಲಮಾಡುವುದೊಂದೇ ಉಪಾಯ. ಎಲ್ಲಿಯ ವರೆಗೆ ಕೇವಲ ಹಿಂದುಗಳ ಸಂಸ್ಥೆ, ಕೇವಲ ಮುಸಲ್ಮಾನರಿಗಾಗಿ ಇರುವ ಸಂಸ್ಥೆ, ಬ್ರಾಹ್ಮಣರಿಗಾಗಿಯೇ ಇರುವ ಸಂಸ್ಥೆ, ತದಿತರರಿಗೇ ಮತ್ತೊಂದು ಮೀಸಲು, ಗಂಡಸರಿಗಾಗಿಯೇ ಒಂದು, ಕೇವಲ ಹೆಂಗಸರಿಗೇ ಪ್ರತ್ಯೇಕ ಎಂಬೀ ಭೇದನಿಷ್ಠ ಸಾಮಾಜಿಕ, ಧಾರ್ಮಿಕ ಮತ್ತು ಸಾಂಸ್ಕೃತಿಕ ಸಂಸ್ಥೆಗಳಿರುವುವೋ ಅಲ್ಲಿಯ ವರೆಗೆ ಐಕ್ಯ ಅಶಕ್ಯ; ಸಹಕಾರ ವಿಶ್ವಾಸ ಸೌಹಾರ್ದಗಳು ಅಸಂಪೂರ್ಣ, ಸಂದಿಗ್ಧ. ಅದರಲ್ಲೂ ಈ ಐಕ್ಯವು ಮಿಶ್ರ ವರ್ಗೀಯರಿರುವ ಹಿಂದುಸ್ತಾನೀ ಸೈನ್ಯದಲ್ಲಿ ಅಗತ್ಯವಾಗಿ ಸ್ಥಾಪಿತವಾಗಬೇಕಾಗಿರುವಾಗ ಭೇದಗ್ರಹಣವನ್ನು ಮೇಲೆ ಹೇಳಿದ ಕ್ಷೇತ್ರಗಳಿಂದ ವಿಧ್ಯುಕ್ತವಾಗಿತೆಗೆದುಹಾಕದಿದ್ದರೆ ಉಳಿಗಾಲವಿಲ್ಲ. ಈ ದೃಷ್ಟಿಯಿಂದಲೇ ಗ್ರಂಥಕರ್ತರು, "ಜನ್ಮದಿಂದ ಜಾತಿಭೇದವನ್ನು ನಾವು ಇಟ್ಟುಕೊಂಡಿರುವ ವರೆಗೂ ಮತ್ತು ರಾಷ್ಟ್ರೀಯತೆಗಿಂತಲೂ ತಮ್ಮ ಧರ್ಮ, ಮತವು ಮಿಗಿಲೆಂದು ನಮ್ಮ ಅಂತರಾಳದಲ್ಲಿ ದೃಢವಾಗಿ ನಂಬುಗೆಯು ಬೇರೂರಿರುವವರಗೂ ನಮ್ಮ ಸಮಾಜಕ್ಕೆ ಕೊಡಲ್ಪಡುವ ಸೈನಿಕ ಶಿಕ್ಷಣವು, ಸಂಧಿ ಸಾಧಿಸುವುದೆಂದೊಡನೆ ತಮ್ಮ ಜಾತಿ, ಧರ್ಮದ ವರ್ಚಸ್ಸನ್ನು ಸ್ಥಾಪಿಸಬೇಕೆಂಬ ವ್ಯಾಮೋಹವನ್ನು ಉಂಟುಮಾಡದೆ ಇರಲಾರದು" ಎಂದಿರುವುದು ವ್ಯವಹಾರಜ್ಞರ ಸೂಕ್ಷ್ಮದೃಷ್ಟಿಯ ಮೆಚ್ಚುಗೆಗೆ ಪಾತ್ರವಾಗದಿರದು. ಅದರಲ್ಲೂ ಅಧ್ಯಾಯಾಂತ್ಯದಲ್ಲಿ ಅವರು ಹೇಳಿದ, "ಸತ್ತ ಮೇಲಿನ ಪಾರಲೌಕಿಕ ಮುಕ್ತಿಯೇ ನಮ್ಮ ಗುರಿ; ಈ ರಾಜಕೀಯ ಸ್ವಾತಂತ್ರ್ಯವು ಭೌತಿಕ; ಎಂಬ ಶ್ರದ್ಧೆಯೇ ಬಹು ಜನರದಾಗಿದ್ದರೆ ಇಷ್ಟು ಚಳವಳಿ ಮಾಡಿ ಬ್ರಿಟಿಶರನ್ನು ಹೊರಗೆ ಅಟ್ಟಿದ್ದು ಮೂರ್ಖತನವಾಯಿತು. ಇನ್ನೂ ಹೊತ್ತು ಮೀರಿಲ್ಲ. ಬ್ರಿಟಿಶರು ದೂರ ಹೋಗಿಲ್ಲ. ಕರೆದರೆ ಸಾಕು; ಅವರು ಬರಲು ಸಿದ್ಧರಿದ್ದಾರೆ" ಎಂಬ ವಾಕ್ಯಗಳಂತೂ ಪರಸ್ಪರ ದ್ವೇಷಿಗಳಾದ ವರ್ಗಹಿತರಕ್ಷಕರಿಗೆ ಕೊನೆಯ ಎಚ್ಚರಿಕೆಯಂತಿದೆ.

'ನಮಗೆ ಬೇಕಾದುದು ಏನು ಜಾತಿಯೆ ಪ್ರಜಾಪ್ರಭುತ್ವವೆ?' ಎಂಬಲ್ಲಿ ಪ್ರಜಾಪ್ರಭುತ್ವದ ಯಶಸ್ಸಿಗೆ ಹೇಗೆ ವರ್ಣರಹಿತ ವರ್ಗರಹಿತ ಸಮಾಜದ ಅವಶ್ಯಕತೆಯಿದೆ ಎಂಬುದನ್ನು ಲೇಖಕರು ತರ್ಕಶುದ್ಧವಾಗಿ ವಿವೇಚಿಸಿ ನಿರ್ಣಯಗಳನ್ನು ಕೊಟ್ಟಿದ್ದಾರೆ. ಇಂಥ ವಿಚಾರ ತಲೆಯಲ್ಲಿ ಹರಿದರೆ ಮಾತ್ರ ಭಾರತೀಯತ್ವವು ನಾಡಿನ ಜನರಲ್ಲಿ ಮೂಡಿ ಬಂದೀತಲ್ಲದೆ ಅನ್ಯಥಾ ಸಾಧ್ಯವಿಲ್ಲವೆಂಬುದನ್ನು ವಿಚಾರವಂತರು ಅಲ್ಲಗಳೆಯಲಾರರು.

## ಹಿಂದು ಧರ್ಮದ ಲಕ್ಷಣ

ಲೇಖಕರ ಹಿಂದುಧರ್ಮದ ವ್ಯಾಖ್ಯೆ ಬಹಳ ನವೀನವೂ ವೈಜ್ಞಾನಿಕವೂ ವಾಸ್ತವವೂ ಆಗಿದೆ. ಹಿಂದುಸಮಾಜವೆಂಬನಿನವು ನಮಗೆ ಆಗುವುದು ಯಾವಾಗ? ಎಂಬ ಪ್ರಶ್ನೆಯನ್ನು ಮಾರ್ಮಿಕವಾಗಿ ಹಾಕಿ, ಹಿಂದು ಹೃದಯದಲ್ಲಿ ಹಿಂದುತ್ವಭಾವ ಜಾಗ್ರತವಾಗಲು ಅನುಭವಸಿದ್ಧವಾದ 'ಮುಸಲ್ಮಾನರ ವಿರೋಧದ ಕಾಲಕ್ಕೆ ಅಥವಾ ಶಾಪ ಕಿರಿಸ್ತರಲ್ಲ ಎಂದು ಸೂಚಿಸುವ ಕಾಲಕ್ಕೆ ಆಯ್ತು' ಎಂಬ ಉತ್ತರವನ್ನು ಕೊಟ್ಟಿದ್ದಾರೆ. ಅಲ್ಲದೆ, 'ಹಿಂದು' ಎಂಬುದು ದೇಶ ವಾಚಕ, ಧರ್ಮವಾಚಕವಲ್ಲ ಎಂಬುದನ್ನು ಇತಿಹಾಸ ಮತ್ತು ಭಾಷಾಶಾಸ್ತ್ರಗಳ ಆಧಾರದಿಂದ ನಿರ್ವಿವಾದವಾಗಿ ಅವರು ನಿರ್ಣಯಿಸಿದ್ದು ಶ್ಲಾಘ್ಯವಾಗಿದೆ.

## ಮುಸಲ್ಮಾನರು

'ಮುಸಲ್ಮಾನರ ತೊಡಕಿ'ನಲ್ಲಿ ಮುಸಲ್ಮಾನರ ಧರ್ಮಾಭಿಮಾನದ ಅತಿರೇಕ, ರಾಷ್ಟ್ರೀಯತ್ವದ ಕಲ್ಪನೆಯ ಅಭಾವ, ಅವರ ಈ ಪ್ರವೃತ್ತಿಯ ಪರಿಣಾಮವನ್ನು ತಡೆಗಟ್ಟುವ ಉಪಾಯ, ಇವುಗಳನ್ನು ಚರ್ಚಿಸಲಾಗಿದೆ. ಇಲ್ಲಿಯ ವಿಚಾರಗಳು ಮನನೀಯವಾಗಿದೆ. ಜ್ಞಾನ ಮತ್ತು ಜನ್ಮಗಳ ಸಂಬಂಧವನ್ನು ಅನಂತರ ಎತ್ತಿ, ಆ ವಿಷಯದಲ್ಲಿ ಮಾತಾಡುವಾಗ, 'ಸಮಾಜದಲ್ಲಿ ಪ್ರತಿಯೊಂದು ವ್ಯಕ್ತಿಗೂ ತನ್ನ ವಿಕಾಸ ಮಾಡಿಕೊಳ್ಳಲು ಅವಕಾಶವಿರಬೇಕು ಎಂಬ ಮೂಲಭೂತ ಮಾನವ ಹಕ್ಕನ್ನು ಸಾರಿಹೇಳಲಾಗಿದೆ. ಈ ವಿಶ್ವಮಾನ್ಯ ವಿಶ್ವತತ್ವದನ್ನು ಆಚರಣೆಯಲ್ಲಿ ತರದ ಯಾವ ರಾಜ್ಯವೂ ಪ್ರಜಾರಾಜ್ಯವೆನಿಸದು. ಇದೇ ಸಂದರ್ಭದಲ್ಲಿ ನಿಜವಾದ ಬ್ರಾಹ್ಮಣನು ಯಾರು? ಎಂಬುದನ್ನು ಹಿಂದಿನ ಮಹಾಗ್ರಂಥಗಳ ಆಧಾರಗಳಿಂದ ಬ್ರಾಹ್ಮಣಂಮನ್ಯರಿಗೆ ತಿಳಿಸಿ ಹೇಳುವ ಕೆಲಸವನ್ನು ಶ್ರೀ ಜೋಶಿಯವರು ಮಾಡಿದ್ದು ಸ್ತುತ್ಯರ್ಹವಾಗಿದೆ.

## ಹೆಣ್ಣು ಮತ್ತು ವಿವಾಹ

'ಅಡಿಗೆಯವಳಾಗುವದು ಹೆಣ್ಣಿನ ಜೀವನದ ಹೆಗ್ಗುರಿಯಲ್ಲ' ಎಂಬ ಪೂರ್ವ ಪಕ್ಷಕ್ಕೆ 'ಹೆಣ್ಣಿನ ವ್ಯಕ್ತಿತ್ವದ ನಿಜವಾದ ವಿಕಾಸವು ತಾಯ್ತನದಲ್ಲಿದೆ' ಎಂಬ ಉತ್ತರಪಕ್ಷಕೊಟ್ಟು ಸಾಧಿಸಿದ ನಿರ್ಣಯ ಶಾಸ್ತ್ರ, ಅನುಭವ ಈ ಎರಡಕ್ಕೂ ಸಮ್ಮತವಾಗಿದೆ. ಅದನ್ನು ಸ್ತ್ರೀ ಪುರುಷರಿಬ್ಬರೂ . ಸತ್ಯಗ್ರಹಣ ದೃಷ್ಟಿಯಿಂದ ಸಾಮಾಜಿಕ ಹಿತದ ದೃಷ್ಟಿಯಿಂದ ಸ್ವೀಕರಿಸಿ ತಮ್ಮ ನಿಜವಾದ ಆಧುನಿಕತೆಯನ್ನು ಜೀವನದಲ್ಲಿ ತೋರಿಸಬಹುದಾಗಿದೆ. ಇಂಥ ಪ್ರಬಂಧಗಳ ಆವಶ್ಯಕತೆ ಈಗ ಬಹಳ; ಏಕೆಂದರೆ, ವಿಮರ್ಶಾಶಕ್ತಿ ಕುಂಠಿತವಾಗಿರುವ ಉದ್ಭಟರು ಅತಿವ್ಯಾಪ್ತಿ, ಅವ್ಯಾಪ್ತಿ ಅಸಂಭವ ದೋಷಗಳಿಂದ ಕೂಡಿದ ವಿವಿಧ ಲಕ್ಷಣಗಳನ್ನು ಸ್ತ್ರೀಪುರುಷರ ಸ್ವಭಾವ, ದೇಹರಚನೆ, ಲಿಂಗ ಬುದ್ಧಿ, ಕರ್ತವ್ಯ ಮತ್ತು ಅಧಿಕಾರಿಗಳ ವಿಷಯದಲ್ಲಿ ಹೇಳಿ ಅರ್ಧಜ್ಞರನ್ನೂ ಅಲ್ಪಜ್ಞರನ್ನೂ ಅಸ್ವಹಾದಿಗೊಯ್ಯುತ್ತಿರುವುದನ್ನು ನಿಲ್ಲಿಸಲು ಇಂಥ ತರ್ಕಶುದ್ಧವಾದ, ಸಮಾಜದ ಹಿತವನ್ನು ಸಾಧಿಸುವ ಬರಹಗಳು ಮೇಲಿಂದ ಮೇಲೆ ಬರಬೇಕಾಗಿದೆ. ಮದುವೆಗಳ ವಿಚಾರದಲ್ಲಿ ಗಾಂಧರ್ವವನ್ನೇ ಎತ್ತಿಹಿಡಿದಿರುವುದು ಶಾಸ್ತ್ರಕ್ಕೂ ಇಂದಿನ ಪರಿಸ್ಥಿತಿಗೂ ಯೋಗ್ಯವಿದೆ. ಅಲ್ಲಿ ಸಂದರ್ಭದಲ್ಲಿ 'ಮನುಷ್ಯಕೃತ ಕಟ್ಟಳೆಗಳನ್ನು ಕಡೆಗಣಿಸಿದರೂ ಸೃಷ್ಟಿಯ ಸನಾತನ ಧರ್ಮವನ್ನು ಮೀರಿ ಯಾರೂ ಬಾಳಲಾರರು' ಎಂದುದು ಔಚಿತ್ಯದ ಒಂದು ಉತ್ತಮ ನಿದರ್ಶನವಾಗಿದೆ, ಸೂಕ್ಷ್ಮಜ್ಞತೆಗೆ ಒಂದು ಪ್ರಮಾಣಪತ್ರದಂತಿದೆ.

## ಸಮಾಜ ಅಂಗಿ, ವ್ಯಕ್ತಿ ಅಂಗ

ಕೊನೆಯದಾಗಿ 'ಸಂಕ್ರಮಣ' ದಲ್ಲಿ ಸದ್ಯದ ಅಪ್ರಾಮಾಣಿಕ ವ್ಯವಹಾರದ ಚಿತ್ರವನ್ನು ಕೊಡಲಾಗಿದೆ. ಅಲ್ಲಿ 'ಯಾವ ಇಡೀ ಗ್ರಂಥವೂ ಅವರ ಉಕ್ತಿಗಳಿಂದ ಕೂಡಿರುವುದಿಲ್ಲವೆಂಬ ವಾಸ್ತವ ಸಂಗತಿಯನ್ನು ಅವರು (ಮಹಾತ್ಮಾ ಗಾಂಧಿ) ಜನಸಾಮಾನ್ಯರಿಗೆಲ್ಲ ಸಾರಿಹೇಳುವುದು ಅವಶ್ಯವಿತ್ತು' ಎಂದುದು ಬಹಳ ಪ್ರಬುದ್ಧವಾದ ವಿಚಾರ. ಅಲ್ಲದೆ, ಧರ್ಮದಲ್ಲಿ ಕಾಲಿಕ ಭಾವನೆಗಳು, ಜೀವನ ಸೌಕರ್ಯಗಳ ಮೇಲಿನ ಅವಲಂಬನ, ವ್ಯಭಿಚಾರ ಇವನ್ನು ಚೆನ್ನಾಗಿ ವಿವರಿಸಿ ಹೇಳಲಾಗಿದೆ. ಸಮಾಜ ಜೀವನದಲ್ಲಿ 'ವ್ಯಕ್ತಿಯ ಸುಖ, ಆನಂದ, ಅಭಿವೃದ್ಧಿಗಳೆಲ್ಲವೂ ಸಾಪೇಕ್ಷವಾಗಿವೆ' ಎಂಬ ಸತ್ಯವನ್ನು ಗ್ರಂಥಕರ್ತರು ಘೋಷಿಸಿರುವುದು ಕಾಲೋಚಿತವಾಗಿದೆ. ರಾಷ್ಟ್ರೀಯತ್ವವನ್ನು ಎತ್ತಿ, ಅಲ್ಲಿಯ ಅಹಂಕಾರ ಭಾವದ ಸಂದರ್ಭಾವಲಂಬನ, ಯುಕ್ತತೆ ಮತ್ತು ಆಯುಕ್ತತೆ ಇವುಗಳನ್ನು ವ್ಯವಹಾರ್ಯವಾಗಿ ವಿವರಿಸಲಾಗಿದೆ. ಅಂತೂ ಪುಸ್ತಕದ ಎಲ್ಲೆಲ್ಲೂ ಉತ್ತಮ ವಿಚಾರಗಳ ತರ್ಕಶುದ್ಧ ಉಪನ್ಯಾಸ ತುಂಬಿರುವುದೆಂದು ಧಾರಾಳವಾಗಿ ಹೇಳಬಹುದು.

ಅಚ್ಚಿನ ದೋಷಗಳು, ನಡೆವಾಗ ಸ್ವಾಭಾವಿಕವಾಗಿ ಎಡಹುವಂತೆ ಎಡಹಿ ಮಾಡಿದ ಸಂದಿಗ್ಧ ಪ್ರಯೋಗಗಳು (ಉದಾ: ಮುಂದುವರೆಯುವುದು, ಜರೆಯುತ್ತಲೆ, ಅರ್ಚಗಳ) ಇಲ್ಲದಿದ್ದರೆ ಪುಸ್ತಕವು ಇನ್ನೂ ಚೆನ್ನಾಗಿ ತೋರುತ್ತಿತ್ತು. ಒಟ್ಟಿನಲ್ಲಿ ಆಧುನಿಕ ವಿಚಾರಗಳೆಂದು ನಿಜವಾಗಿ ಹೇಳಬಹುದಾದ, ನ್ಯಾಯ್ಯವೂ ಮಾನವನ ಉತ್ತಮ ಸಂಸ್ಕೃತಿಗೆ ಭೂಷಣವೂ ಉದಾರವೂ ಆದ ತತ್ವಗಳನ್ನು ಈ ಪುಸ್ತಕದಲ್ಲಿ ಪ್ರತಿಪಾದಿಸಿ ಬರಲಿರುವ ಸಮಾಜ ರಚನೆಗೆ ದಾರಿ ಮಾಡಿಕೊಟ್ಟ ಶ್ರೀ ಶಂ. ಬಾ. ಜೋಶಿಯವರಿಗೆ ಕನ್ನಡನಾಡು ಧನ್ಯವಾದವನ್ನರ್ಪಿಸದಿರದು

---

* "ಯಕ್ಷಪ್ರಶ್ನೆ" ಲೇ: ಶ್ರೀ ಶಂ. ಬಾ. ಜೋಶಿ, ಪ್ರಕಾಶಕರು: ಪರ್ಣಕುಟಿ ಗ್ರಂಥಮಾಲೆ ಗೋಕರ್ಣ ಪುಟ ೧೮೩. ರೂ. ೩/—

# ದೇಶಾಂತರಗಳಿಂದ

## ಜಪಾನಿನ ಪರಿಸ್ಥಿತಿ

ಇತ್ತೀಚಿಗೆ ಜಪಾನಿಗೆ ತೆರಳಿದ ಅಮೇರಿಕದ ಸಮಿತಿಗಳ ವರದಿಯಂತೆ ಜಪಾನು ಮಿತ್ರರಾಷ್ಟ್ರಗಳಿಗೆ ಬಹಳ ಪರಿಹಾರ ಕೊಡಲಾರದು ಎಂದು ತಿಳಿಯುತ್ತದೆ.

ಜಪಾನಿನ ನಿಃಶಸ್ತ್ರೀಕರಣ ಸಂಪೂರ್ಣವಾಗಿದೆಯೆಂದು ಭಾರತದಿಂದ ಜಪಾನಿಗೆ ಹೋದ ಸರ್. ಬಿ. ಎನ್. ರಾಯರು ಹೇಳಿದರು. ಹೊಸ ಜಪಾನೀ ರಾಜ್ಯಘಟನೆಯು ಆಂಗ್ಲೋ ಅಮೇರಿಕನ್ ಮಾದರಿಯದೆಂದು ಅವರ ಹೇಳಿಕೆ. ಅಲ್ಲಿ ವಯಸ್ಕ ಮತದಾನ ಪದ್ಧತಿಯನ್ನು ಜಾರಿಮಾಡಲಾಗಿದೆಯೆಂದೂ ಮೊದಲ ಬಾರಿಗೆ ಹೆಂಗಸರಿಗೆ ಮತಾಧಿಕಾರ ಸಿಕ್ಕಿದೆಯೆಂದೂ ತಿಳಿಯುತ್ತದೆ. ಕೆಲವೇ ಕುಟುಂಬಗಳ ಅಂಕೆಗೊಳಗಾಗಿದ್ದ ಉದ್ಯಮಗಳಿಂದು ವಿಕೇಂದ್ರೀಕೃತವಾಗಿವೆ. ಸ್ತ್ರೀಯರ ಪರಿಸ್ಥಿತಿಯನ್ನು ಸುಧಾರಿಸಲಾಗಿದೆ. ೨೦ ಮಹಿಳೆಯರನ್ನು 'ಡಯಟ್' ಸಮಿತಿಗೆ ಸೇರಿಸಿಕೊಳ್ಳಲಾಗಿದೆ. ಯುದ್ಧದ ಹಿಂದೆ ಹೇಗೋ ಹಾಗೆ ಈಗಲೂ ಚಕ್ರವರ್ತಿಯೆಂದರೆ ದೇವರೆಂದೇ ತಿಳಿಯಲ್ಪಡುತ್ತದೆ.

ಹತ್ತಿ ಮತ್ತು ಸಣಬನ್ನು ಕಳಿಸಿದ್ದಕ್ಕೆ ಬದಲಾಗಿ ಭಾರತಕ್ಕೆ ಜಪಾನು ಬಟ್ಟೆಯ ಯಂತ್ರೋಪಕರಣಗಳನ್ನು ಪಡೆಯಬಹುದೆಂದು ಹೇಳಲಾಗಿದೆ.

## ಪಾಲಿಸ್ತಾನದ ನೀಗ್ರುಳ್ಳಿ

ತಾತ್ಕಾಲಿಕ ಒಪ್ಪಂದದಿಂದ ಚಿರಕಾಲಿಕ ಒಪ್ಪಂದವನ್ನು ಸಾಧಿಸಲು ಬಂದ ಸಂ. ರಾ. ಸಂಘದ ಮಧ್ಯಸ್ಥರಾದ ಕೌಂಟ್ ಬರ್ನದೊತ್ತೆಯವರ ಆಸ್ಥೆ ಈಗ ನಿರಾಶೆಯಾಗಿ ಪರಿಣಮಿಸಿದೆ. ಪಾಲಿಸ್ತಾನದ ಶಾಂತಿಯ ನೀಗ್ರುಳ್ಳಿ ಒಡೆಯಿತು. ಮಧ್ಯಸ್ಥಿಕೆಯ ಮಾತುಗಳು ಅರಬ–ಯಹೂದಿಗಳಿಬ್ಬರಿಗೂ ರುಚಿಸದಾದವು. ಅರಬ ಸೈನ್ಯದ ಮುಖಂಡರಾದ ಕಿಂಗ್ ಅಬ್ದುಲ್ಲಾರವರು ಪಾಲಿಸ್ತಾನದಲ್ಲಿ ಚಿರಸ್ಥಾಯಿಯಾದ ವಿಜಯ ದುಂದುಭಿಯನ್ನು ಮೊಳಗಿಸುವೆವು; ಇಲ್ಲವೆ ಅಲ್ಲಿಯೇ ತಮ್ಮ ಸಮಾಧಿಯನ್ನು ಸೇರುವೆವು ಎಂಬುದು ಅರಬರ ನಿರ್ಧಾರವೆಂದು ಸಾರಿದ್ದಾರೆ.

ಇಸ್ರೇಲಿನ ಅಧಿಕಾರಿಗಳೂ ಅದೇ ರೀತಿ ತಮ್ಮ ರಾಜ್ಯವನ್ನು ಮನ್ನಿಸಲೊಲ್ಲದ ಅರಬರನ್ನು ೬ ವಾರಗಳಲ್ಲಿ ಪಾಲಿಸ್ತಾನದಿಂದ ಹೊರಗಟ್ಟುವೆವು ಎಂದು ಗರ್ಜಿಸುತ್ತಿದ್ದಾರೆ.

ಬರ್ನದೊತ್ತೆಯವರ ಸಲಹೆ ಹೀಗಿತ್ತು: ಪಾಲಿಸ್ತಾನದಲ್ಲಿ ಅರಬ ಮತ್ತು ಯಹೂದಿಗಳ ಗಡಿಯನ್ನು ಸಂಧಾನದಿಂದಾರಂಭಿಸಿ ಸಮಿತಿಯೊಂದರ ಮೂಲಕ ನಿರ್ಣಯಿಸತಕ್ಕದ್ದು. ಜೆರೂಸಲೇಮನ್ನು ಅರಬರಿಗೆ ಬಿಟ್ಟು ಹೈಫಾವನ್ನು ಅನಿರ್ಬದ್ಧ ಬಂದರವನ್ನಾಗಿಯೂ ಲಿಡ್ಡಾವನ್ನು ಅನಿರ್ಬದ್ಧ ವಿಮಾನ ನಿಲ್ದಾಣವನ್ನಾಗಿಯೂ ಮಾಡತಕ್ಕದ್ದು. ಪಾಲಿಸ್ತಾನವನ್ನು 'ಫೆಡರಲ್ ಯೂನಿಯನ್– ಸಂಯುಕ್ತ ಒಕ್ಕೂಟ'ವನ್ನಾಗಿ ಮಾಡಿ, ಸುಂಕ, ಯೋಜನೆಗಳು, ವಿದೇಶ ಧೋರಣ, ಸಂರಕ್ಷಣೆ ಇವುಗಳಲ್ಲಿ ಎರಡೂ ರಾಷ್ಟ್ರಗಳು ಒಟ್ಟಾಗಿ ಒಂದು ಕೇಂದ್ರ ಸಮಿತಿಯ ಮೂಲಕ ತಮ್ಮ ಕಾರ್ಯವನ್ನು ಸಾಗಿಸಬೇಕು. ಆ ಸಮಿತಿಯ ಸದಸ್ಯರು ಆಯಾ ಭಾಗದ ವಿಷಯಗಳ ಬಗ್ಗೆ ಸಂಪೂರ್ಣ ಅಧಿಕಾರ ಹೊಂದಿದವರಾಗಿರತಕ್ಕದ್ದು.




'ಒಂದು ಜನಾಂಗ, ಎರಡು ಜರ್ಮನಿ, ಮುಖಂಡನಿಲ್ಲ'

ಇದೇ ೯ ನೆಯ ತಾರೀಕಿಗೆ ತಾತ್ಕಾಲಿಕ ಒಪ್ಪಂದದ ಅವಧಿ ಮುಗಿಯಿತು. ಉಭಯ ರಾಜ್ಯಗಳೂ ಯುದ್ಧ ಸನ್ನದ್ಧವಿರುವುದರಿಂದ ಈಗಿಂದೀಗ ಪುನಃ ಘರ್ಷಣೆಗೆ ಪ್ರಾರಂಭವಾಗಬಹುದೆಂದು ಊಹಿಸಲಾಗಿದೆ. ಡಮಾಸ್ಕಸ್ಸಿನ ಸುದ್ದಿಯ ಪ್ರಕಾರ ಹೈಫಾ ನಗರ ಸಭೆಯ ಕಾರ್ಯದರ್ಶಿ ರಶೀಲ್ ಎಲ್ ಕೌರಿಯನ್ನು ಇಸ್ರೇಲ್ ಸರಕಾರವು ಯೆಹೂದಿ ರಾಜ್ಯದಲ್ಲಿ ಅರಬ ಅಲ್ಪಸಂಖ್ಯಾಕರಿರುವಲ್ಲಿ ಪ್ರತಿನಿಧಿಯನ್ನಾಗಿ ನಿಯಮಿಸಿದೆ. ಸಿರಿಯದ ಸೇನಾಧಿಪತಿಗಳು ಹೊಸ ರೀತಿಯ ಸಮರವನ್ನು ಪ್ರಾರಂಭಿಸುವ ಬಗ್ಗೆ ಆಜ್ಞಾಪ್ತರಾಗಿದ್ದಾರೆಂದು ಬೇರೆ ವರದಿಗಳು ಹೇಳುತ್ತವೆ.

ತಾತ್ಕಾಲಿಕ ಶಾಂತಿಯ ಅವಧಿಯನ್ನು ಪುನಃ ಬೆಳೆಸಲು ಪಾಲಿಸ್ತಾನದ ಮಧ್ಯಸ್ಥ ಬರ್ನದೊತ್ತೆಯವರು ಅರಬ ಯೆಹೂದಿಗಳಿಗೆ ಸೂಚಿಸಿದ್ದಾಗಿ ಇತ್ತೀಚಿನ ಸುದ್ದಿ. ಇದಕ್ಕೆ ಅರಬರು ಒಪ್ಪುವುದಿಲ್ಲವೆಂದು ಇರಾಕಿನ ಮುಖ್ಯ ಮಂತ್ರಿಗಳು ಹೇಳಿದರು. ಕೌಂಟರ ಹತ್ತಿರ ಮತ್ತೆ ಹೊಸ ಸೂಚನೆಗಳಿವೆಯಂತೆ.

ಅಮೇರಿಕದ ಯೆಹೂದಿ ಸಂಸ್ಥೆಯ ವಾರ್ಷಿಕ ಸಮ್ಮೇಳನದಲ್ಲಿ ಪಾಲಿಸ್ತಾನದ ಬಗ್ಗೆ ಬ್ರಿಟನ್ನು ತಳೆದ ಧೋರಣವನ್ನು ಖಂಡಿಸಲಾಯಿತು. ಅಧ್ಯಕ್ಷತೆ ವಹಿಸಿದ ಸಿನೇಟರ್ ಪೆಪ್ಪರರು ಯೆಹೂದಿಗಳಿಗೆ ಶಸ್ತ್ರಾಸ್ತ್ರ ಪೂರೈಸಲು ಅಮೇರಿಕಕ್ಕೆ ಬಿನ್ನವಿಸಿದರು.

ಬ್ರಿಟನ್ನು ಪಾಲಿಸ್ತಾನ ಸ್ಟರ್ಲಿಂಗ್ ಸಂಗ್ರಹದ ೧೦೦ ಕೋಟಿ ಪೌಂಡುಗಳನ್ನು ವಿಚಾರವಿಲ್ಲದೆ ತಡೆಹಿಡಿದಿದೆಯೆಂದು ಇಸ್ರೇಲಿನ ಅರ್ಥ ಮಂತ್ರಿ ಶ್ರೀ ಕಪಲಾನರು ಸಂ. ರಾ. ಸಂಘಕ್ಕೆ ದೂರು ಕೊಟ್ಟಿದ್ದಾರೆ.

## ಬರ್ಲಿನ್ನಿನ ಬಿಕ್ಕಟ್ಟು

ಬರ್ಲಿನ್ನಿನಲ್ಲಿರುವ ರಶಿಯದ ಸೇನಾಪತಿ ಮಾರ್ಶಲ್ ವಾಸಿಲಿ ಸೊಕೋಲೋವಸ್ಕಿಯು ಮಾತಾಡಬಂದ ಬ್ರಿಟಿಶ, ಫ್ರೆಂಚ– ಅಮೇರಿಕದ ಪ್ರತಿನಿಧಿಗಳಿಗೆ ಅವರ ರಾಷ್ಟ್ರಗಳೇ ಬಿಕ್ಕಟ್ಟಿಗೆ ಕಾರಣವಾದವೆಂದು ಹೇಳಿದನು. ಆ ಮೂರು ರಾಷ್ಟ್ರಗಳು ಜರ್ಮನರ ಹಿತವನ್ನು ಕಡೆಗಣಿಸಿ ಸೋವಿಯೆಟ್ಟನ್ನು ಕೇಳದೆ ಮನಬಂದಂತೆ ತಮ್ಮ ಧೋರಣವನ್ನು ರೂಪಿಸಲು ನಿರ್ಣಯಗಳನ್ನು ಲಂಡನ್ ಪರಿಷತ್ತಿನಲ್ಲಿ ತೆಗೆದುಕೊಂಡವೆಂದೂ ಅವನು ಆರೋಪಿಸಿದನು. ಜರ್ಮನಿಯ ಆರ್ಥಿಕ ಪರಿಸ್ಥಿತಿಯನ್ನು ಅವು ಹದಗೆಡಿಸಲು ಪ್ರಯತ್ನಿಸಿದುದರಿಂದ ರಶಿಯವು ತನ್ನ ವಲಯದ ೨ ಕೋಟಿ ಜನರ ರಕ್ಷಣೆಗಾಗಿ ತಕ್ಕ ಪೂರೈಕೆಯನ್ನು ಮಾಡಲು ಕ್ರಮತೆಗೆದುಕೊಳ್ಳಬೇಕಾಯಿತು ಎಂಬುದು ಅವನ ವಾದ.

ಪಶ್ಚಿಮದ ಮೂರು ಸೈನಿಕ ಆಡಳಿತಗಳೂ ಒಂದು ಆಜ್ಞೆಯನ್ನು ಹೊರಡಿಸಿ ಹೊಸ ನಾಣ್ಯದಲ್ಲಿ ಕೆಲಸಗಾರರು ನೂರಕ್ಕೆ ಕೇವಲ ೨೫ರಷ್ಟು ಕೂಲಿಯನ್ನು ಪಡೆಯಬಹುದೆಂದು ಸಾರಿದವು. ಇದರಿಂದ ಹೊಸ ಸೋವಿಯೆಟ್ ಮಾರ್ಕ್ ನಾಣ್ಯವನ್ನು ಪಾಶ್ಚಾತ್ಯಮಿತ್ರರು ಮನ್ನಿಸಿದಂತಾಯಿತೆಂದು ವ್ಯಾಪಾರಿಗಳ ಅಭಿಪ್ರಾಯ.

ಜರ್ಮನಿ ಮತ್ತು ಇತರ ಕಡೆ ಸೋವಿಯಟ್ ಅನುಸರಿಸಿದ ಕಾರ್ಯಗತಿಯಿಂದ ಯುರೋಪಿನಲ್ಲಿ ರಶಿಯವು ದೊಡ್ಡ ಪ್ರಮಾಣದ ಹೊಸ ಧೋರಣವನ್ನು ವಹಿಸಿ ನಡೆದುಕೊಳ್ಳಲಿದೆಯೆಂದು ರಾಜಕೀಯ ವರ್ಗಗಳಲ್ಲಿ ಹೇಳಲಾಗುತ್ತಿದೆ.




ಬರ್ಲಿನ್ನಿನ ವಿಧ್ವಸ್ತ ಪತ್ರಿಕಾ ಕಚೇರಿಯ ಮುಂದೆ ಬರ್ಲಿನ್ ವಾಚಕರು. ಮಿತ್ರರಿಗೆ ಆಟ, ಜರ್ಮನ್ನರಿಗೆ ಪ್ರಾಣಸಂಕಟ!

## ಕಮ್ಯುನಿಜಮ್ಮಿಗೆ ಪ್ರತ್ಯಸ್ತ್ರ

ಭಾರತ, ಪಾಕಿಸ್ತಾನ, ಚೀನ, ಬ್ರಹ್ಮದೇಶ, ಇಂಡೋನೇಶಿಯ, ಫಿಲಿಪ್ಪೈನ್ಸ್ ಮತ್ತು ಪರ್ಶಿಯಗಳ ಕೂಲಿಕಾರ ಪ್ರತಿನಿಧಿಗಳು ಏಶಿಯದ ಕೂಲಿಕಾರ ಮಹಾಮಂಡಲವನ್ನು ರಚಿಸಲು ನಿರ್ಧರಿಸಿರುವುದಾಗಿ ಸಾನ್ ಫ್ರಾನ್ಸಿಸ್ಕೋದಿಂದ ಬಂದ ಸುದ್ದಿಯಿಂದ ತಿಳಿಯುತ್ತದೆ. ಅಂತರ್. ಅಮೇರಿಕ ಪರಿಷತ್ತಿನೊಡನೆ ಸಂಬಂಧ ಬೆಳೆಸಿಕೊಂಡು ಎರಡೂ ಸೇರಿ ಟ್ರೇಡ್ ಯೂನಿಯನ್ನುಗಳ ಜಾಗತಿಕ ಮಹಾಮಂಡಲವನ್ನು ಸ್ಥಾನಭ್ರಂಶಗೊಳಿಸುವುದಾಗಿ ಹಿಂದೀ ಕೂಲಿಕಾರ ಪ್ರತಿನಿಧಿ ಶ್ರೀ ಹರಿಹರನಾಥ ಶಾಸ್ತ್ರಿಗಳು ಸಾರಿದರು. ಎರಡೂ ಸಂಘಗಳ ಪ್ರತಿನಿಧಿಗಳು ಆಗಲೇ ಪರಸ್ಪರ ಮಾತುಕತೆಗಳನ್ನು ಪ್ರಾರಂಭಿಸಿದ್ದಾರೆ.

ಘಟನೆಯನ್ನು ರಚಿಸುತ್ತಿರುವ ಹೊಸ ಮಹಾಮಂಡಲದ ಪುರಸ್ಕರ್ತರ ಸಭೆಯಲ್ಲಿ ಶ್ರೀ ಹರಿಹರನಾಥ ಶಾಸ್ತ್ರಿಗಳು, 'ನಾವು ಕಮ್ಯುನಿಜಮ್ಮನ್ನು ವಿರೋಧಿಸುವುದಿಲ್ಲ. ಪ್ರಗತಿ, ನ್ಯಾಯ, ಸಾಮ್ಯಗಳನ್ನು ಪ್ರಜಾಸತ್ತಾತ್ಮಕವಾದ ಶಾಂತಿ ಮಾರ್ಗಗಳಿಂದ ಸಾಧಿಸುವುದೇ ನಮ್ಮ ಗುರಿ' ಎಂದು ಒಂದು ಹೇಳಿಕೆಯನ್ನು ಓದಿ ಹೇಳಿದರು.

ಅನಿರ್ಬದ್ಧ ವ್ಯಾಪಾರದ ಟ್ರೇಡ್ ಯೂನಿಯನ್ನಿಗೂ ಕಮ್ಯುನಿಸ್ಟ್ ತತ್ವಕ್ಕೂ ಇನ್ನು ಮೇಲೆ ಯಾವದೂ ಸಂಬಂಧವಿಲ್ಲ ಎಂದು ಅಮೇರಿಕದ ಕೂಲಿಕಾರ ಪ್ರತಿನಿಧಿ ಶ್ರೀ ಫ್ರಾಂಕ್ ಫೆಂಟನ್ನನು ಘೋಷಿಸಿದನು.

## ಫ್ರೆಂಚ್ ಹಿಂದುಸ್ತಾನದ ಭವಿಷ್ಯ

ಫ್ರಾನ್ಸಿನ ರಾಯಭಾರಿಯ ಮೂಲಕ ಫ್ರೆಂಚ್ ಸರಕಾರಕ್ಕೂ ಹಿಂದೀ ಸರಕಾರಕ್ಕೂ ನಡುವೆ ಪತ್ರವ್ಯವಹಾರ ನಡೆದು ಫ್ರೆಂಚ್ ಹಿಂದುಸ್ತಾನದ ಪ್ರಜೆಗಳ ಭವಿಷ್ಯವನ್ನು ನಿರ್ಣಯಿಸುವ ಹಕ್ಕು ಪ್ರಜೆಗಳಿಗೆ ಕೊಡಲ್ಪಟ್ಟಿತು.

ಫ್ರಾನ್ಸಿನ ರಾಷ್ಟ್ರೀಯ ಸಭೆಯಲ್ಲಿ ಕಳೆದ ಜೂನ ೮ ರಲ್ಲಿ ಒಂದು ಘೋಷಣೆಯನ್ನು ಮಾಡಲಾಯಿತು. ಅದರ ಪ್ರಕಾರ ಹಿಂದುಸ್ತಾನದ ಫ್ರೆಂಚರಿಗೆ ಸೇರಿದ ಐದೂ ಪ್ರದೇಶಗಳ ಮ್ಯುನಿಸಿಪಲ್ ಕೌನ್ಸಿಲ್ಲುಗಳ ಚುನಾಯಿತ ಸದಸ್ಯರು ಯಾರ ಒತ್ತಾಯಕ್ಕೂ ಒಳಪಡದೆ ಸ್ವತಂತ್ರರಾಗಿ ಆ ಪ್ರದೇಶಗಳು ಈಗಿದ್ದಂತೆಯೇ ಫ್ರೆಂಚ್ ಒಕ್ಕೂಟಕ್ಕೆ ಸೇರಿರಬೇಕೋ ಅಥವಾ ಹಿಂದೀ ಒಕ್ಕೂಟಕ್ಕೆ ಹೊಸದಾಗಿ ಸೇರಬೇಕೋ ಎಂಬ ಪ್ರಶ್ನೆಯನ್ನು ಮತಗಣನೆಯಿಂದ ತೀರ್ಮಾನಿಸತಕ್ಕದ್ದಾಗಿದೆ. ಪ್ರತಿಯೊಂದು ಪ್ರದೇಶವು ತನ್ನಷ್ಟಕ್ಕೆ ತಾನೇ ಒಂದು ಘಟಕವೆಂದು ತಿಳಿದು ಪ್ರತ್ಯೇಕವಾಗಿ ತನ್ನ ಭವಿಷ್ಯವನ್ನು ನಿರ್ಣಯಿಸಿಕೊಳ್ಳಬೇಕೆಂದು ಘೋಷಣೆಯಿದೆ. ಆ ಪ್ರಕಾರ ಸದ್ಯದಲ್ಲೇ ಚಂದ್ರನಗರದ ಮ್ಯುನಿಸಿಪಲ್ ಕೌನ್ಸಿಲ್ಲುಗಳು ಸೇರಿ ಚರ್ಚಿಸಿ ಮತಗಣನೆ ನಡೆಸಲು ಯೋಗ್ಯ ದಿನವನ್ನು ಗೊತ್ತುಮಾಡುವದಾಗಿ ಫ್ರೆಂಚ್ ರಾಯಭಾರಿ ಹೇಳಿದ್ದಾನೆ. ಭಾರತ ಸರಕಾರವು ಈ ಘೋಷಣೆಗೆ ಒಪ್ಪಿಗೆ ಕೊಟ್ಟಿದೆ.

---

ಜಗತ್ತಿನ ಬಟ್ಟೆ, ಅಹಾರದಲ್ಲಿ ೧೩೫ ಲಕ್ಷ ಟನ್ನಿನಷ್ಟು ಸಮುದ್ರದಿಂದ ಲಭಿಸುತ್ತದೆ.

# ವಿಚಿತ್ರವಿಶ್ವ

ಒಂದನೆಯ ನೆಪೋಲಿಯನ್ನನ (ಫ್ರೆಂಚ್) ರಾಣಿಯಾದ ಮೇರಿಲುಯಿಗೆ ಮನಸ್ಸು ಬಂದಂತೆ ತನ್ನ ಕಿವಿಗಳನ್ನು ಕುಣಿಸಲು ಬರುತ್ತಿತ್ತಂತೆ.



\+ \+ \+

ನ್ಯೂಯಾರ್ಕಿನಲ್ಲಿ ಎಡ್ವರ್ಡ್ ಸ್ಯಾಡ್‌ವೆಲ್ ಎಂಬ ಮನುಷ್ಯನಿದ್ದನು. ೧೮೭೭ರಲ್ಲಿ ಅವನಿಗೆ ಒಂದು ರೇಲ್ವೆ ಅಪಘಾತ ಸಂಭವಿಸಿ ನಿಶ್ಚೇತನನಾಗಿದ್ದನು. ಹತ್ತು ದಿನಗಳ ನಂತರ ಹೆಣವನ್ನು ಹೆಂಡತಿ ತರಿಸಿದಳು. ಸರಕಾರವು ಆಗ ಅವನು ಸತ್ತನೆಂದು ತೀರ್ಮಾನಿಸಿತು. ಆ ತೀರ್ಮಾನವಾದ ೧೨ ಗಂಟೆಗಳ ನಂತರ ಅವನು ಉಸಿರಾಡುವುದು ಹೆಂಡತಿಗೆ ತಿಳಿಯಿತು. ಅವನು ಅವಳ ಶೈತ್ಯೋಪಚಾರದಿಂದ ದಿನೇ ದಿನೇ ಗುಣ ಹೊಂದಿ ೮೯ನೆಯ ವರ್ಷ ವಯಸ್ಸಿನ ವರೆಗೆ ಬದುಕಿ ಕಳೆದವಾರ ದಿವಂಗತನಾದನು.

\+ \+ \+

ಇಂಗ್ಲೆಂಡಿನ ಸ್ಟಾಕ್ ಹೋಮಿನಲ್ಲಿರುವ ತನ್ನ ಮನೆಗೆ ದಕ್ಷಿಣ ಡೆವನ್ನಿನಿಂದ ಶ್ರೀಮತಿ ಹೊಸನಳು ಹಿಂದಿರುಗುವಾಗ ಬಿಟ್ಟುಹೋದ ಅವಳ ನಾಯಿ ಆ ನಾನೂರ ಮೈಲು ದೂರವನ್ನು ೧೪ ತಿಂಗಳು ಕಾಲ ನಡೆದು ಪೂರೈಸಿ ಒಡತಿಯ ಬಳಿ ಸೇರಿತಂತೆ. ಈ ನಾಯಿಯ ಪ್ರಾಮಾಣಿಕ ಪ್ರೀತಿಯ ಮುಂದೆ ಮನುಷ್ಯ ತಲೆಬಾಗಬೇಕಲ್ಲವೇ ?

× × ×

ಕ್ರಿ. ಪೂ ೨೯೧ ರಲ್ಲಿ ಎಟ್ರೂಸಿಯದಿಂದ ರೋಮನ್ನರು ವರ್ಣಚಿತ್ರದ ಕಲೆಯನ್ನು ಕಲಿತರು. ಕ್ಯಾನ್ವಾಸಿನ ಮೇಲೆ ವರ್ಣಚಿತ್ರ ಬರೆಯುವದು ಕ್ರಿ ಪೂ ೬೬ ರಲ್ಲೇ ರೋಮನ್ನರಿಗೆ ಗೊತ್ತಿತ್ತು.

× × ×

೩೮, ೬೪, ೨೦, ೪೮೯ ಸಲ ೯ ನ್ನು ೯ ರಿಂದ ಗುಣಿಸುತ್ತ ಹೋದರೆ ೩೬ ಕೋಟಿ ೯೦ ಲಕ್ಷ ಅಂಕೆಗಳ ಒಂದು ಸಂಖ್ಯೆ ಲಭಿಸುವುದು. ಒಂದು ಅಂಗುಲ ಸ್ಥಳದಲ್ಲಿ ೫ ಅಂಕೆಗಳನ್ನು ಬರೆಯಬಹುದಾದರೆ ಮೇಲಿನ ಸಂಖ್ಯೆಯ ಉದ್ದಳತೆ ೧೧೬೪ ಮೈಲುಗಳಷ್ಟಾಗುವುದು. ಅದನ್ನು ಬರೆಯಲು ಮನುಷ್ಯನ ಇಡಿ ಆಯುಷ್ಯ ಸಾಲದು.

\+ \+ \+

ಶ್ರೀಮತಿ ಇಲಿಯಟ್ ಲಿನ್ ಎಂಬ ಪ್ರಸಿದ್ಧ ವೈಮಾನಿಕಳು ೧೫ ಗಂಟೆಗಳಲ್ಲಿ ಇಂಗ್ಲೆಂಡಿನ ೬೫ ವಿಮಾನ ನಿಲ್ದಾಣಗಳಿಗೆ ಭೆಟ್ಟಿಯಿತ್ತಳು.

\+ \+ \+

ಜಪಾನೀ ಚಕ್ರವರ್ತಿ ಪರಂಪರೆ ೨೬೦೦ ವರ್ಷಗಳ ಹಿಂದೆ ಪ್ರಾರಂಭವಾಯಿತು. ಈಗಿನ ಹಿರೋಹಿಟೋ ೧೨೪ ನೆಯ ಚಕ್ರವರ್ತಿ, ಜಪಾನೊಂದೇ ಈ ರೀತಿ ಅತಿ ಪ್ರಾಚೀನವಾದ ಚಕ್ರವರ್ತಿ ಪರಂಪರೆಯನ್ನುಳ್ಳ ನಾಡು.

× × ×

ಹೌಸ್ ಆಫ್ ಲಾರ್ಡ್ಸ್ ಎಂದರೆ ಇಂಗ್ಲೆಂಡಿನ ಶಾಸನಸಭೆಯ ಮೇಲ್ಮನೆ. ಅದರ ಸದಸ್ಯರಿಗೆ ವೇತನವಿಲ್ಲ. ಅವರಿಗೆ ತಮ್ಮ ಹೆಮ್ಮನೆಗಳಿಂದ ವೆಸ್ಟಮಿನಿಸ್ಟರ್ ಅರಮನೆಗೆ ಹೋಗಲು ತಗಲುವ ಪ್ರಯಾಣದ ವೆಚ್ಚವನ್ನು ಮಾತ್ರ ಕೊಡಲಾಗುವದು.

× × ×

ಸೆಕ್ರಸೀರ ಪರ್ವತದ ಪ್ರದೇಶದಲ್ಲಿ ಒಂದು ಜಾತಿಯ ಮರಗಳಿವೆ; ಅವು ೫೦ ಅಡಿ ಎತ್ತರ ಬೆಳೆಯುತ್ತವೆ. ಅವು ಹೂಗಳಂತೆ ಅಂಗಿಗಳನ್ನು ((Shirts) ಬಿಡುತ್ತವೆ. ಅಂದರೆ ಅವುಗಳ ಕೆಂಪು ತೊಗಟೆಯನ್ನು ಅಲ್ಲಿ ಕತ್ತರಿಸಿ ರೆಡ್ ಇಂಡಿಯನ್ನರು ಅಂಗಿಗಳಂತೆ ಧರಿಸುತ್ತಾರೆ.



## ಈ ಭೂಮಿ ಹೀಗೆಯೆ ಇತ್ತೆ?

ಮಗು,

ನೀನು ನಮ್ಮ ಈ ಭೂಮಿಯ ನಕಾಶೆಯನ್ನು ನೋಡಿರಲೇಬೇಕು. ಅದರಲ್ಲಿ ಏಶಿಯಾ, ಆಫ್ರಿಕಾ, ಯುರೋಪ, ಅಸ್ಟ್ರೇಲಿಯಾ, ದ. ಅಮೇರಿಕಾ, ಉತ್ತರ ಅಮೇರಿಕಾ ಎಂಬ ಆರು ದೊಡ್ಡ ಖಂಡಗಳು ಮತ್ತು ಅನೇಕಾನೇಕ ಚಿಕ್ಕ ದೊಡ್ಡ ದ್ವೀಪಗಳು ಇವೆಯೆಂದು ನಿನಗೆ ಗೊತ್ತು. ಇವೆಲ್ಲ ಮೊದಲಿನಿಂದಲೂ ಈಗಿದ್ದಲ್ಲಿಯೇ ಇದ್ದವೋ ಅಥವಾ ಬೇರೆಲ್ಲಿಯಾದರೂ ಇದ್ದವೋ? ಈಚೆಗೆ ಕೆಲ ಜನ ವಿಜ್ಞಾನಿಗಳು ಈ ವಿಷಯದಲ್ಲಿ ವಿಚಾರಿಸಿ ಆಶ್ಚರ್ಯಕರವಾದ ಸಂಗತಿಗಳನ್ನು ಹೊರಗೆಡಹಿದ್ದಾರೆ.

ಭೂಮಿಯ ಉತ್ಪತ್ತಿಯನ್ನು ಕುರಿತು ನೀನು ನಿನ್ನ ಭೂಗೋಲ ಪುಸ್ತಕದಲ್ಲಿ ಸ್ವಲ್ಪ ಮಟ್ಟಿಗೆ ಓದಿರಬಹುದು. ಕುದಿಯುತ್ತಿರುವ ಸೂರ್ಯಗೋಲದಿಂದ ಸಾವಿರಾರು ಕೋಟಿ ವರ್ಷಗಳ ಹಿಂದೆ ಸಿಡಿದು ಹೋದ ಒಂದು ತುಣುಕು ಈ ಭೂಮಿ. ಬರಬರುತ್ತ ಅದರ ಮೇಲ್ಭಾಗ ತಂಪಾಯಿತು, ಹೀಗೆಂದು ಶಾಸ್ತ್ರಜ್ಞರು ಊಹಿಸಿದ್ದಾರೆ. ಮುಂದೆ ಮಳೆಯೆಂಬದು ಪ್ರಾರಂಭವಾಗಿ ಭೂಮಿ ಸಮುದ್ರಗಳಾದವಂತೆ. ಸಸ್ಯ, ಪ್ರಾಣಿಗಳು ಆಮೇಲೆ ಹುಟ್ಟಿದವಂತೆ.

### ಒಂದು ಸಮಸ್ಯೆ

ಭೂಮಿಯನ್ನು ಪರೀಕ್ಷಿಸುವ ಶಾಸ್ತ್ರಜ್ಞರು ಪ್ರಾಚೀನ ಕಾಲದಲ್ಲಿ ಭೂಮಿಯ ಮೇಲೆ ಒಂದು ಜಾತಿಯ ಸಸ್ಯ ಅನೇಕ ಕಡೆ ಪಸರಿಸಿತ್ತೆಂದು ಕಂಡುಹಿಡಿದಿದ್ದಾರೆ. ಅದರ ಹೆಸರು "ಗ್ಲೋಸೋಪ್ಟೆರಿಸ್". ಅದು ಭಾರತದ ಕಾಶ್ಮೀರ, ಆಫ್ರಿಕೆ, ಆಸ್ಟ್ರೇಲಿಯಾ, ದಕ್ಷಿಣ ಧ್ರುವ ಖಂಡ, ದಕ್ಷಿಣ ಅಮೇರಿಕೆ ಈ ಎಲ್ಲ ಕಡೆಗಳಲ್ಲಿ ಹಬ್ಬಿತ್ತೆಂದು ಕಂಡುಬಂದಿದೆ. ಈಗ ಆ ಸಸ್ಯದ ಜಾತಿಯೇ ಅಳಿದುಹೋಗಿದೆ. ಆದರೆ ೧೦ ಕೋಟಿ ವರ್ಷಗಳಿಗಿಂತಲೂ ಪೂರ್ವದಲ್ಲಿ ಇದರದೇ ರಾಜ್ಯ.

ಆದರೆ ಕಾಶ್ಮೀರ, ಆಸ್ಟ್ರೇಲಿಯಾ, ದಕ್ಷಿಣ ಧ್ರುವಗಳಂಥ ಬೇರೆ ಬೇರೆ ಹವಾಗುಣದ ಪ್ರದೇಶಗಳಲ್ಲಿ ಒಂದೇ ಜಾತಿಯ ಈ ಸಸ್ಯ ಇಷ್ಟು ದೊಡ್ಡ ಪ್ರಮಾಣದಲ್ಲಿ ಹೇಗೆ ಹಬ್ಬಲು ಸಾಧ್ಯವಾಯಿತು? ದಕ್ಷಿಣ ಧ್ರುವದ ಸಹಿಸಲಾರದ ಚಳಿಯಲ್ಲಿ ಇದು ಖಂಡಿತವಾಗಿ ಬೆಳೆಯಲು ಸಾಧ್ಯವೇ ಇದ್ದಿಲ್ಲ. ಅಂದಮೇಲೆ ಈ ಸಸ್ಯ ಅಲ್ಲಿಯೂ ಬೆಳೆದು ಗುರುತು ಕಾಣಿಸುತ್ತದಲ್ಲ? ಇದು ಹೇಗೆ?

### ಒಡೆದು ಹೋದ ಮಹಾಖಂಡ

ಭೂಮಿ ಶಾಸ್ತ್ರಜ್ಞರು ತಲೆ ಕೆರೆದುಕೊಂಡರು. ರುಥರಫೋರ್ಡ ಪ್ಲಾಟರೆಂಬ ಅಮೇರಿಕನ್ ಪ್ರಕೃತಿಶಾಸ್ತ್ರಿಗಳು ಇದಕ್ಕೆ ಹೀಗೆ ಕಾರಣ ಕೊಡುತ್ತಾರೆ:

ಈಗ ಸಮುದ್ರಮಯವಾಗಿರುವ ದಕ್ಷಿಣ ಗೋಲಾರ್ಧದಲ್ಲಿ ಪ್ರಾಚೀನ ಕಾಲದಲ್ಲಿ, ಅಂದರೆ ಸುಮಾರು ೨೦ ಕೋಟಿ ವರ್ಷಗಳ ಹಿಂದೆ, ಒಂದು ಭಾರಿ ದೊಡ್ಡ ಭೂಖಂಡ ಇದ್ದಿರಬೇಕು. ಆ ಇಡಿ ಖಂಡಕ್ಕೆ ಖಂಡವೇ ಬುಡ ಸಡಿಲಾಗಿ ಉತ್ತರಾಭಿಮುಖವಾಗಿ ಜಾರುತ್ತ ಹೊರಟಿರಬೇಕು. ಈ ಪ್ರಯಾಣದಲ್ಲಿ ಆ ಖಂಡ ಅಲ್ಲಲ್ಲಿ ಒಡೆದು ಬೇರೆ ಬೇರೆ ದಿಕ್ಕಿಗೆ ಜಾರುತ್ತ ಹೋಗಿ ಈಗಿನ ದಕ್ಷಿಣ ಅಮೇರಿಕೆ, ಆಫ್ರಿಕೆ, ಹಿಂದುಸ್ತಾನ, ಅಸ್ಟ್ರೇಲಿಯಾ ಖಂಡಗಳಿದ್ದಲ್ಲಿ ಬಂದು ನಿಂತಿರಬೇಕು. ಅದರ ಇನ್ನೊಂದು ತುಣುಕು ದಕ್ಷಿಣಕ್ಕೆ ಸಾಗಿ ದಕ್ಷಿಣ ಧ್ರುವ ಖಂಡವಾಗಿರಬೇಕು. ಈ ಮಹಾ ಖಂಡ ತನ್ನ ಮೂಲಸ್ಥಾನದಲ್ಲಿದ್ದಾಗ ಅದರ ಹವೆ ಸಮಶೀತೋಷ್ಣವಾಗಿತ್ತು. ಆ ಖಂಡದಲ್ಲೆಲ್ಲ ಮೇಲೆ ಹೇಳಿದ ಸಸ್ಯ ಅಂಕೆಯಿಲ್ಲದೆ ಬೆಳೆದಿತ್ತು. ಮುಂದೆ ಈ ಭೂಗೋಲದ ಹವೆ ತೀರ ಉಗ್ರವಾದಾಗ ಈ ಸಸ್ಯ ನಾಶವಾಗಿ ಹೋಯಿತು.

ಇದು ನಿನಗೆ ತೀರ ವಿಚಿತ್ರವಾಗಿ ಕಾಣಬಹುದು. ಆದರೆ ರುಥರಫೋರ್ಡ ಪ್ಲಾಟರು ಒಂದು ಮನವೊಪ್ಪಿಸುವ ಕಾರಣ ಕೊಡುತ್ತಾರೆ. ಇಲ್ಲಿ ಕೊಟ್ಟ ಚಿತ್ರ ನೋಡು. ಅದರಲ್ಲಿ ಭೂಮಿಯ ಖಂಡಗಳನ್ನೆಲ್ಲ ಒತ್ತೊತ್ತಾಗಿ ಹಚ್ಚಿ ತೋರಿಸಲಾಗಿದೆ. ಆಫ್ರಿಕೆಯನ್ನು ತಳ್ಳಿ ಉತ್ತರ ದಕ್ಷಿಣ ಅಮೇರಿಕೆಗಳಿಗೆ ಒತ್ತಾಗಿರಿಸಿದರೆ ಒಡೆದ ಹಪ್ಪಳದ ತುಣುಕುಗಳನ್ನು ಜೋಡಿಸಿದಾಗ ಕೂಡುವಂತೆ ಎಷ್ಟು ಸರಿಯಾಗಿ ಕೂಡಿಕೊಳ್ಳುತ್ತವೆ! ಇದು ಏನೋ ಆಕಸ್ಮಾತ್ತಾಗಿ ಕೂಡಿಬಂತೆಂದು ಹೇಳುವ ಹಾಗಿಲ್ಲ. ಆಕಾರ, ಅಳತೆ, ಎಲ್ಲವೂ ನೀಟಾಗಿ ಹೊಂದಿಕೊಳ್ಳುತ್ತದಲ್ಲ. ಅದರಿಂದ ಈ ಖಂಡಗಳೆಲ್ಲ ಒಂದೇ ದೊಡ್ಡ ಹಪ್ಪಳದ ತುಂಡುಗಳಾಗಿರಬೇಕು.

### ಬುಡ ಗಟ್ಟಿಯಿಲ್ಲ

ಇಷ್ಟು ಪ್ರಚಂಡವಾದ ಭೂಖಂಡ ಕಿತ್ತು ಬರುವದೆಂದರೇನು? ಸಿಕ್ಕಸಿಕ್ಕತ್ತ ಜಾರುತ್ತ ಹೋಗುವದೆಂದರೇನು? ಈ ಭೂಮಿ ಮೇಲಿಂದ ಕೆಳಗಿನ ವರೆಗೂ ಒಂದೇ ಒಂದು ಗೋಲವಲ್ಲವೆ? ಎಂದು ನೀನು ಕೇಳಬಹುದು. ಆದರೆ ಒಂದು ಸಾಧಾರಣ ಒಣಗಲಾದ ತೆಂಗಿನಕಾಯಿಯ ಚಿಪ್ಪು ಒಳಗಿನ ತಿರುಳಿಗೆ ಅಂಟಕೊಂಡಿರುವಂತೆ ಭೂಮಿಯು ಹೊರ ಚಿಪ್ಪು ಒಳಗಿನ ಸಿಲಿಕಾ–ಮೆಗ್ನೇಶಿಯಾ ಧಾತುವಿನ ದಪ್ಪವಾದ ತಿರುಳಿಗೆ ಅಂಟಕೊಂಡಿದೆ. ತೆಂಗಿನ ಚಿಪ್ಪಿಗೆ ಬಲವಾದ ಹೊಡೆತ ಬಿದ್ದರೆ ಒಳಗಿನ ತಿರುಳನ್ನು ಇದ್ದಂತೆಯೆ ಬಿಟ್ಟು ಚಿಪ್ಪಿನ ಒಂದು ತುಣುಕು ಮಾತ್ರ ಎದ್ದು ಬರುವದನ್ನು ನೀನು ನೋಡಿರಬಹುದು. ಭೂಮಿಯ ಚಿಪ್ಪು, ಭೂಮಿಯ ಆಕಾರದೊಡನೆ ಹೋಲಿಸಿದರೆ, ತೆಂಗಿನ ಕಾಯಿಯ ಚಿಪ್ಪಿಗಿಂತಲೂ ತೆಳ್ಳಗಿದೆ. ೩೫೦೦ ಮೈಲು ತ್ರಿಜ್ಯವುಳ್ಳ ಈ ಭೂಮಿಯೆಂಬ ಕಾಯಿಯ ಚಿಪ್ಪು ಬರಿ ೧೦ ರಿಂದ ೨೦ ಮೈಲು ಮಾತ್ರ ದಪ್ಪ ಇದೆ. ಒಳಗಿನ ಅಥವಾ ಹೊರಗಿನ ಪ್ರಚಂಡವಾದ ನೂಕಲು ಇಲ್ಲವೆ ಸೆಳೆತಕ್ಕೆ ಈ ದಕ್ಷಿಣ ಗೋಲದ ಭಾರೀ ಚಿಪ್ಪು ಕಿತ್ತು ಸರಿದಾಡಹತ್ತಿರಬಹುದು.

ಒಮ್ಮೆ ಸರಿಯಹತ್ತಿದ ಬಳಿಕ ಅದು ತಿರ್ರಿರಿ ತಿರುಗುವ ಭೂಮಿಯ ಓಟದ ಭರಕ್ಕೆ ಸಿಕ್ಕಿ ಅಲ್ಲಲ್ಲಿ ಬಿರುಕು ಬಿದ್ದದ್ದು ಸ್ವಾಭಾವಿಕವೆ. ಒಂದು ತುಣುಕು ಈಶಾನ್ಯಾಭಿಮುಖವಾಗಿ ಹೊರಟು ಈಗ ದಕ್ಷಿಣ ಅಮೇರಿಕೆಯಿರುವಲ್ಲಿಗೆ ಮುಟ್ಟಿರಬಹುದು. ಆಫ್ರಿಕೆಯೆಂಬ ತುಂಡು ಉತ್ತರಕ್ಕೆ ಸರಿದು ಯುರೋಪ ಖಂಡಕ್ಕೆ ಢಿಕ್ಕಿ ಹೊಡೆಯಿತು. ಈ ಢಿಕ್ಕಿಯ ಪೆಟ್ಟಿಗೆ ಯುರೋಪಿನ ದಕ್ಷಿಣ ಭಾಗದ ನೆಲ ಉಬ್ಬಿ ಎತ್ತರವಾಗಿ ಆಲ್ಪ್ಸ ಪರ್ವತ ಶ್ರೇಣಿಯಾಯಿತು. ಹಿಂದುಸ್ತಾನವೆಂಬ ತುಂಡು ಏಶಿಯಾಕ್ಕೆ ಹೋಗಿ ತಾಗಿದ ಪೆಟ್ಟಿಗೆ ಹಿಮಾಲಯವೆಂಬ ಪ್ರಚಂಡ ಪರ್ವತ ಶ್ರೇಣಿಯಾಯಿತು.

ಇಷ್ಟೆಲ್ಲ ಆಗಲು ಸುಮಾರು ೧೨ ಕೋಟಿ ವರ್ಷಗಳು ಹಿಡಿದವು. —ಮಾಮಾ.

## ನಿರಾಶ್ರಿತರು ದುಡಿಯಬೇಕು

ಪೂರ್ವ ಪಂಜಾಬ ಸರಕಾರದ ಪುನರ್ನಿವೇಶನದ ಡಾಯರೆಕ್ಟರ ಜನರಲ್‌ರಾದ ರಾವಬಹಾದ್ದೂರ ರಾಧಾಕಾಂತರು ತಾ. ೩ ರಂದು ಪತ್ರಿಕಾ ಪ್ರತಿನಿಧಿಗಳ ಸಭೆಯಲ್ಲಿ ಭಾಷಣ ಮಾಡುತ್ತ ಪೂ. ಪಂಜಾಬದ ನಿರಾಶ್ರಿತ ಶಿಬಿರಗಳಲ್ಲಿನ್ನ ನಿರಾಶ್ರಿತರನ್ನು ಕೆಲಸ ಮಾಡಲು ಸಮರ್ಥರಿದ್ದವರು ಮತ್ತು ಅಸಮರ್ಥರಿದ್ದವರು ಹೀಗೆ ವರ್ಗೀಕರಣ ಮಾಡಲಾಗುತ್ತಿದ್ದು ಸಶಕ್ತರು ಸರಕಾರವು ಕೊಟ್ಟ ಕೆಲಸ ಮಾಡಬೇಕಾಗುವದೆಂದೂ ಇಲ್ಲದಿದ್ದರೆ ಅವರಿಗೆ ಈಗ ಸಲ್ಲುವ ಪುಕ್ಕಟೆ ಆಹಾರ ಸೀದಾ ನಿಲ್ಲಿಸಲಾಗುವದೆಂದೂ ಹೇಳಿದರು. ಕೆಲಸ ಮಾಡಲು ಒಪ್ಪದ ೮೭ ಸಾವಿರ ನಿರಾಶ್ರಿತರ ಸೀದಾ ಈಗ ನಿಲ್ಲಿಸಲಾಗಿರುವದೆಂದು ಹೇಳಿ ಸದ್ಯಕ್ಕೆ ೩ ಲಕ್ಷ ೧೭ ಸಾವಿರ ನಿರಾಶ್ರಿತರು ಶಿಬಿರದಲ್ಲಿದ್ದು ಅವರೆಲ್ಲರಿಗೂ ಪುಕ್ಕಟೆ ಆಹಾರ ಒದಗಿಸಲಾಗುತ್ತಿತ್ತೆಂದು ಅರುಹಿದರು.

ಕೆಲವು ನಿರಾಶ್ರಿತರು ದುಡಿಯಲೊಲ್ಲದೆ ಭೂಮಿಗಳನ್ನು ಬೇಡುತ್ತಿದ್ದಾರೆ. ಎಲ್ಲರಿಗೂ ಭೂಮಿ ಕೊಡುವದು ಸಾಧ್ಯವಿಲ್ಲ. ಪಾಕಿಸ್ತಾನಕ್ಕೆ ಹೋದ ಮುಸಲ್ಮಾನರು ಪೂ. ಪಂಜಾಬದಲ್ಲಿ ಬಿಟ್ಟು ಹೋದ ಭೂಮಿಯ ಕ್ಷೇತ್ರವು ಪ. ಪಂಜಾಬದಲ್ಲಿ ಶೀಖರು ಬಿಟ್ಟು ಬಂದ ಭೂಮಿಯ ಕ್ಷೇತ್ರಕ್ಕಿಂತ ಬಹಳ ಕಡಮೆ ಇದೆಯೆಂದೂ ಭೂಮಿ ಬಿಟ್ಟು ಬಂದ ನಿರಾಶ್ರಿತರಿಗೆ ಭೂಮಿ ಒದಗಿಸುವದು ಸರಕಾರದ ಧೋರಣವಿರುವದೆಂದೂ ಮೊದಲು ಭೂಮಿ ಇಲ್ಲದವರು ಈಗ ಅದನ್ನು ಕೇಳುವದು ಅಸಮಂಜಸವೆಂದೂ ಅಂತಹರು ದುಡಿದು ಆಹಾರ ದೊರಕಿಸಿಕೊಳ್ಳತಕ್ಕದ್ದೆಂದೂ ರಾವಬಹಾದ್ದೂರ ರಾಧಾಕಾಂತರು ಹೇಳಿದರು.

## ಕಾಂಗ್ರೆಸ ಕಾರ್ಯ ಸಮಿತಿ

ಡಾ. ರಾಜೇಂದ್ರ ಪ್ರಸಾದರ ಅಧ್ಯಕ್ಷತೆಯಲ್ಲಿ ತಾ. ೧ ಕ್ಕೆ ಸೇರಿದ ಕಾಂಗ್ರೆಸ ಕಾರ್ಯ ಸಮಿತಿಯ ಸಭೆಯು ದಿಲ್ಲಿಯಲ್ಲಿ ತಾ. ೨ ರಂದು ಮತ್ತೆ ಸೇರಿ ೪ ತಾಸು ಚರ್ಚೆ ಮಾಡಿ ಕೆಲ ಗೊತ್ತುವಳಿ ಸ್ವೀಕರಿಸಿತು.

ಮುಂಬಯಿ ಪ್ರಾಂತಿಕ ಕಾಂಗ್ರೆಸ ಸಮಿತಿಯ ಅಧ್ಯಕ್ಷರ ಮುಖಾಂತರ ಮುಂಬಯಿ ನಾಗರಿಕರು ದಿಲ್ಲಿಯಲ್ಲಿ ನೆಲೆಗೊಳ್ಳಲಿರುವ ಅ. ಭಾ. ಕಾಂಗ್ರೆಸ ಸಮಿತಿಗೆ ಸಕಲ ಸೌಕರ್ಯ ಸಜ್ಜಿತವಾದ ಕೇಂದ್ರ ಕಚೇರಿಯನ್ನು ಕಟ್ಟಿಸಲು ಕೊಟ್ಟ ದಾನವನ್ನು ಕಾರ್ಯ ಸಮಿತಿಯು ಸಭೆಯಲ್ಲಿ ಅಭಿನಂದನಪೂರ್ವಕ ಸ್ವೀಕರಿಸಿತು.

ಪ್ರಾಂತಿಕ ಕಾಂಗ್ರೆಸ ಸಮಿತಿಗಳ ಅಧಿಕಾರ ಕ್ಷೇತ್ರದ ಪ್ರಶ್ನೆ, ಪೂರ್ವ ಬಂಗಾಲ ಕಾಂಗ್ರೆಸ ಪ್ರತಿನಿಧಿಗಳಿಗೆ ಪಶ್ಚಿಮ ಬಂಗಾಲ ಕಾಂಗ್ರೆಸ ಸಮಿತಿಯಲ್ಲಿ ಯಾವ ಸ್ಥಾನಮಾನವಿರತಕ್ಕದ್ದು, ಸಿಂಧ ಗಡಿನಾಡ ಪ್ರಾಂತಗಳ ಪ್ರತಿನಿಧಿಗಳು ಹಿಂದುಸ್ತಾನದಲ್ಲಿ ಬಂದು ನೆಲಸಿದ್ದರೆ ಅವರಿಗೆ ಮುಂದಿನ ಕಾಂಗ್ರೆಸ ಅಧಿವೇಶನಕ್ಕೆ ಬರಲು ಒಪ್ಪಿಗೆ ಕೊಡುವದು ಇವೇ ಮೊದಲಾದ ವಿಷಯಗಳ ಬಗ್ಗೆ ಗೊತ್ತುವಳಿಗಳು ಸ್ವೀಕೃತವಾದವು. ರಾಷ್ಟ್ರೀಯ ಕಾಂಗ್ರೆಸ್ಸಿನ ಮುಂಬರುವ ಬಹಿರಂಗ ಅಧಿವೇಶನ ಡಿಸೆಂಬರ ತಾ. ೧ ಕ್ಕೆ ಜಯಪುರ ನಗರದಲ್ಲಿ ನೆರೆಯಿಸಬೇಕೆಂದು ನಿರ್ಧರಿಸಲಾಯಿತು.

## ಕಾಶ್ಮೀರಕ್ಕೆ ಬರದ ಭಯವಿಲ್ಲ

### ಹಿಂದೀ ಸೈನಿಕರ ಸ್ತುತ್ಯ ಕಾರ್ಯ

ರಾಜೂರಿ–ಪುಂಛ ವಿಭಾಗದಲ್ಲಿ ಜಮ್ಮೂ ಪ್ರಾಂತದಲ್ಲಿ ಗಡಿ ಪ್ರದೇಶದ ಹಳ್ಳಿಗಳ ಮೇಲೆ ದಾಳಿಗಾರರು ಬೆಳೆಯನ್ನು ಲೂಟಿ ಮಾಡಿ ಬರಗಾಲ ಉಂಟು ಮಾಡಲು ಪ್ರಯತ್ನಿಸಿದರು. ಆದರೆ ಹಿಂದುಸ್ತಾನದ ಸೈನಿಕರು ಈ ಪ್ರದೇಶದ ಬೆಳೆಯನ್ನು ಕೊಯ್ದು ರಾಶಿ ಮಾಡಲು ಹಳ್ಳಿಗರಿಗೆ ನೆರವಾದ್ದರಿಂದ ಬರಗಾಲದ ಭೀತಿ ತಪ್ಪಿತು. ದಾಳಿಗಾರರು ಬೆಳೆಯನ್ನು ಸುಟ್ಟು ಹಾಕುವ ಕ್ರಮ ಅನುಸರಿಸಿದ್ದರಿಂದಲೂ ಪಾಕಿಸ್ತಾನದ ಸೈನಿಕರು ಬೆಳೆ ಲೂಟಿ ಮಾಡಹತ್ತಿದ್ದರಿಂದಲೂ ಜನರು ಕಂಗೆಟ್ಟು ಓಡಿ ಹೋಗಿದ್ದರು. ಹಿಂದುಸ್ತಾನ ಸೈನಿಕರ ನೆರವಿನಿಂದ ಓಡಿ ಹೋದವರೂ ಮತ್ತೆ ಬಂದು ನೆಲಸಹತ್ತಿದ್ದಾರೆ.

ಸಿಂಧ ಪ್ರಾಂತದಲ್ಲಿರುವ ೩೧೮ ಮೈಲು ಉದ್ದದ ಜೋಧಪುರ ರೇಲ್ವೆಯನ್ನು ಪಾಕಿಸ್ತಾನ ಸರಕಾರವು ಕೊಳ್ಳುವ ಬಗ್ಗೆ ಜೋಧಪುರ ದರಬಾರ ಮತ್ತು ಪಾಕಿಸ್ತಾನಗಳಲ್ಲಿ ಒಪ್ಪಂದವಾಗಿರುವದೆಂದು ತಿಳಿದು ಬಂದಿದೆ.

## ಹೈದರಾಬಾದದಲ್ಲಿ ಅತ್ಯಾಚಾರ

ಹೈದರಾಬಾದ ಸಂಸ್ಥಾನ ಕಾಂಗ್ರೆಸಿನ ಕೇಂದ್ರ ಕಚೇರಿಯವರು ಮದ್ರಾಸದಿಂದ ಹೊರಡಿಸಿದ ಪ್ರಕಟನೆಯಲ್ಲಿ ಜೂನ ತಾ.೧೬ ರಿಂದ ೩೦ರ ವರೆಗೆ ನಡೆದ ರಜಾಕಾರರ ಅತ್ಯಾಚಾರಗಳ ವಿವರ ಈ ಕೆಳಗಿನಂತೆ ಉಂಟು:

**ಮಹಾರಾಷ್ಟ್ರ:—** ೫೨ ಹಳ್ಳಿಗಳಲ್ಲಿ ೮,೨೧,೪೪೬ ರೂ. ೩೦ ಬಂಡಿಗಳು ೨೦೦ ತೊಲೆಗಿಂತ ಹೆಚ್ಚು ಬಂಗಾರ ೨೦೦ ಚೀಲ ಕಾಳು ಮತ್ತು ಕೆಲವು ದನಕರಗಳು ಲೂಟಾದವು. ೧೬ ಜನ ಸತ್ತರು. ೫ ಹಳ್ಳಿಗಳೂ ಅನೇಕ ಮನೆಗಳೂ ಭಸ್ಮವಾದವು. ೩೭ ಜನರಿಗೆ ಗಾಯವಾಯ್ತು. ಓರ್ವ ಸ್ತ್ರೀಯಳ ಅಪಹರಣವಾಯ್ತು.

**ಕರ್ನಾಟಕ:—** ೬೦ ಹಳ್ಳಿಗಳಲ್ಲಿ ೧೨,೧೮,೪೦೦ ರೂ. ಮತ್ತು ೧೨೭೦ ಚೀಲಕಾಳು, ೧೧೨೨ ತೊಲಿ ಭಂಗಾರ, ೪೩೦ ತೊಲಿ ಬೆಳ್ಳಿ, ಲೂಟಾಯ್ತು. ೭ ಜನರು ಮರಣಕ್ಕೆ ಗುರಿಯಾದರು. ೧೧ ಮನೆಗಳು ೧ ಗುಡಿಸಲು ಸುಟ್ಟವು. ೨೨ ಜನರಿಗೆ ಚಿತ್ರಹಿಂಸೆ ಕೊಡಲಾಯ್ತು. ೬ ಜನ ಸ್ತ್ರೀಯರ ಅಪಹರಣವಾಯ್ತು.

**ಆಂಧ್ರ:—** ೪೧ ಹಳ್ಳಿಗಳಲ್ಲಿ ೧,೧೭,೯೫೦ ರೂ. ೧೯೦ ಚೀಲ ಕಾಳು ೨೭ ತೊಲಿ ಬಂಗಾರ ೪೫೦ ತೊಲಿ ಬೆಳ್ಳಿ ಲೂಟಿಯಾಯ್ತು. ೩೧ ಜನರು ಪ್ರಾಣಕ್ಕೆ ಎರವಾದರು. ೯೦ ಮನೆಗಳೂ ಗುಡಿಸಲುಗಳೂ ಸುಟ್ಟವು. ೨೪೪ ಜನರು ಗಾಯಗೊಂಡರು. ೧೪ ಜನರ ಬಂಧನವಾಯ್ತು. ೨೧ ಸ್ತ್ರೀಯರ ಮಾನಭಂಗವೂ ೨ ಸ್ತ್ರೀಯರ ಅಪಹರಣವೂ ಆಯ್ತು.

ಉಸ್ಮಾನಾಬಾದ ಜಿಲ್ಹೆಯ ದೇವಲಾಲಿಯಿಂದ ಬಂದ ಒಂದು ಸಮಾಚಾರದಿಂದ ಜನರ ಮೇಲೆ ಸಿಕ್ಕಾಬಟ್ಟೆ ಗುಂಡು ಹಾರಿಸಿ ಸ್ತ್ರೀಯರಿಗೂ ಮಕ್ಕಳಿಗೂ ಚಿತ್ರಹಿಂಸೆ ಕೊಡಲಾಯ್ತು ಮತ್ತು ೨೫ ಸ್ತ್ರೀಯರನ್ನು ಸಾಲಾಗಿ ನಿಲ್ಲಿಸಿ ಅವರ ಸತೀತ್ವವನ್ನು ಹರಣಮಾಡಲಾಯ್ತು ಎಂದು ತಿಳಿಯುತ್ತದೆ.

ಆರ್ಥಿಕ ದಿಗ್ಬಂಧನದ ಪರಿಣಾಮವಾಗಿ ಹೈದರಾಬಾದವು ಜಗತ್ತಿನಲ್ಲಿಯ ಅತಿ ತುಟ್ಟಿಯ ಪ್ರದೇಶಗಳಲ್ಲೊಂದಾಗಿ ಪರಿಣಮಿಸಿದೆ. ವೀಳ್ಯದೆಲೆಕೂಡ ೩ ರೂ.ಗೆ ನೂರರಂತೆ ಮಾರಾಟವಾಯ್ತು ಉಳಿದ ಅವಶ್ಯಕ ಸರಕುಗಳ ಬೆಲೆ ಮೂರು ಪಟ್ಟು ಹೆಚ್ಚಾಗಿವೆ. ಕಲ್ಲಿಜ್ಜಿಲಿಯ ಪೂರೈಕೆ ನಿಂತಿದ್ದರಿಂದ ಕೆಲ ರೈಲು ನಿಲ್ದಾಣಗಳಲ್ಲಿಯ ದೀಪದ ವ್ಯವಸ್ಥೆಯನ್ನು ನಿರ್ದಿಷ್ಟಪಡಿಸಲಾಗಿದೆಯೆಂದು ತಿಳಿಯುತ್ತದೆ.

## ಮುಂಬಯಿಯಲ್ಲಿ ಗಲಭೆ

ಮುಂಬಯಿ ನಗರದಲ್ಲಿ ತಾ. ೪ ರಂದು ಸಂಜೆ ಒಂದು ಸಣ್ಣ ಕಾರಣಕ್ಕಾಗಿ ಗಲಭೆ ಪ್ರಾರಂಭವಾಯಿತು. ಟ್ರಾಮಿನಲ್ಲಿ ಒಬ್ಬನು ಇನ್ನೊಬ್ಬನ ಕಿಸೆ ಕತ್ತರಿಸಿ ಓಡಿ ಹೋಗುವಾಗ ಕಿಸೆ ಕತ್ತರಿಸಿಕೊಂಡವನು ಕಳ್ಳನನ್ನು ಹಿಡಿಯಿರೆಂದು ಕೂಗಲಾರಂಭಿಸಿದನು. ಇದರಿಂದ ಜನ ನೆರೆದು ಗಲಭೆಯಾಗಿ ಅದು ಜಾತೀಯ ಸ್ವರೂಪ ತಾಳಿತು. ೨೦ ನಿಮಿಷಗಳಲ್ಲಿಯೇ ಪೋಲೀಸರು ಗಲಭೆ ಹತ್ತಿಕ್ಕಲು ಉಗ್ರ ಉಪಾಯ ಕೈಕೊಂಡರು. ಕೂಡಲೆ ಕರ್ಫ್ಯೂ ಆಜ್ಞೆ ಜಾರಿಯಾಯಿತು. ಈಗ ಪರಿಸ್ಥಿತಿಯು ಹಿಡಿತದಲ್ಲಿ ಬಂದಿದೆ. ಈ ಎರಡು ದಿನಗಳಲ್ಲಿ ಒಟ್ಟು ೩೬ ಜನರು ಸತ್ತಿರುವರೆಂದೂ ೧೦೦ ಜನರು ಗಾಯಗೊಂಡಿರುವರೆಂದೂ ತಿಳಿಯುತ್ತದೆ.

## ಆಗಾಖಾನ ಅರಮನೆ

### ದ. ಹಿಂದುಸ್ತಾನದ ಸೈನ್ಯಕೇಂದ್ರ

ಪುಣೆಯ ಪ್ರಸಿದ್ಧ ಆಗಾಖಾನರ ಅರಮನೆಯನ್ನು ಮುಂಬಯಿ ಭೂಮಿ ವಶಪಡಿಸಿಕೊಳ್ಳುವ ೧೯೪೮ ರ ಕಾಯದೆಯ ೫ ನೇ ಕಲಮಿನನ್ವಯ ಕಲೆಕ್ಟರರು ವಶಪಡಿಸಿಕೊಂಡು ದಕ್ಷಿಣ ಹಿಂದುಸ್ತಾನದ ಸೈನ್ಯಾಧಿಕಾರಿಗಳಿಗೆ ಒಪ್ಪಿಸಿದ್ದಾರೆ. ಮಹಾತ್ಮಾ ಗಾಂಧಿಯವರು ಇದೇ ಅರಮನೆಯಲ್ಲಿ ೧೯೪೩ ರಲ್ಲಿ ಇತಿಹಾಸ ಪ್ರಸಿದ್ಧ ಉಪವಾಸ ಕೈಕೊಂಡಿದ್ದರು.

## ಬ್ರಿಟಿಶ ಅಧಿಕಾರಿಯ ಬಂಧನ

ಪಶ್ಚಿಮ ಬಂಗಾಲದ ಪೂರೈಕೆ ಖಾತೆಯಲ್ಲಿನ್ನ ಒಬ್ಬ ಬ್ರಿಟಿಶ ವಿಶೇಷಾಧಿಕಾರಿಯನ್ನು ಸರಕಾರಕ್ಕೆ ಲಕ್ಷಗಟ್ಲೆ ರೂಪಾಯಿ ಹಾನಿ ಮಾಡಿದನೆಂಬ ಆರೋಪದ ಮೇಲೆ ತಾ ೨೦ ರಂದು ಕಲಕತ್ತೆಯಲ್ಲಿ ಬಂಧಿಸಿ ೧೫೦೦೦ ರೂ. ಗಳ ಜಾಮೀನಿನ ಮೇಲೆ ಬಿಡಲಾಯಿತು.

# ಜನಮತ

## ಗೋವಿನಜೋಳದ ಉಚ್ಚಾಟನೋಪಾಯವೇ?

ಮಹಾಶಯರೇ:

ನಮ್ಮ ಜಿಲ್ಲೆಯಲ್ಲಂತೂ ಸರಕಾರದವರು ಸ್ಥಾಪಿಸಿದ ಅಗ್ಗದರದ ಧಾನ್ಯದಂಗಡಿಗಳೆಂದರೆ ಸರಕಾರದವರು ದೇಶ ಪರದೇಶಗಳಿಂದ ಸಂಗ್ರಹಿಸಿದ ಗೋವಿನ ಜೋಳವನ್ನು ಹೇಗಾದರೂ ದಾಟಿಸಿಬಿಡುವ ಉಪಾಯವೆಂದು ಜನರು ಆಡಿಕೊಳ್ಳುತ್ತಿದ್ದಾರೆ. ಏಕೆಂದರೆ ಒಂದು ಪಕ್ಷದ ಭಿಕ್ಷೆಯಾದ ೧೬೬ ಟಿಂಸ್ ಧಾನ್ಯದಲ್ಲಿ ಅಕ್ಕಿ ಗೋದಿಗಳ ಪ್ರಮಾಣ ಬರಿ ೫೪ ಟಿಂಸ್. ಕೆಂಪು ಜೋಳದ ಅಭಾವದಿಂದ ಅದರ ಪಾಲೂ ಗೋವಿನ ಜೋಳಕ್ಕೇ ಸೇರಿ, ೯೪ ಟಿಂಸ್ ಗೋವಿನ ಜೋಳ ಮತ್ತು ೧೮ ಟಿಂಸು ಬಾರ್ಲಿ ಭತ್ತವನ್ನು ೪ ತಾಸುಗಳ ವರೆಗೆ ಅಂಗಡಿಯ ಬಾಗಿಲಲ್ಲಿ "ಕ್ಯೂ" ನಿಂತು, ತರಬೇಕು. ಈ ೯೪ ಟಿಂಸ್ ಗೋವಿನಜೋಳವನ್ನು ಹೇಗೆ ದಕ್ಕಿಸಿಕೊಳ್ಳಬೇಕೆಂಬ ಬಗ್ಗೆ ಇನ್ನೂ ಯಶಸ್ವಿ ಸಂಶೋಧನಗಳಾಗಿಲ್ಲ. ಅದರ ರೊಟ್ಟಿ ಹೊಟ್ಟೆಯನ್ನು ಕೆಡಿಸುತ್ತದೆ. ರವಾ ಸರಿಯಾಗಿ ಬೇಯುವದಿಲ್ಲ. ಅದರೆ ಕಲ್ಲು ಮಣ್ಣು ತುಂಬುವ ಹೊಟ್ಟೆಗೆ ಇದಾದರೂ ಸಾಕೆಂದರೆ ಗೋವಿನ ಜೋಳವನ್ನು ರವಾ-ಹಿಟ್ಟು ಮಾಡಿಸಲು ಗಿರಣಿಗಳು ಕೂಡ ಹಿಂಜರಿಯುತ್ತವೆ. ಗೋವಿನ ಜೋಳ ಗಿರಣಿಯ ಕಲ್ಲುಗಳನ್ನು ಬೇಗನೆ ಸವೆಸುತ್ತದಂತೆ! ಅದನ್ನು ತಿಂದ ಹೊಟ್ಟೆಯ ಗತಿ ಇನ್ನೇನೊ, ಎಂದು ನಾನು ಗಾಬರಿಯಾಗಿದ್ದೇನೆ. ೫೪ ಟಿಂಸ್ ಉಪಯುಕ್ತ ಧಾನ್ಯಗಳಿಗಾಗಿ ೧೧೨ ಟಿಂಸ್ ಸಂಶಯಾತ್ಮಕ ಕಾಳುಗಳನ್ನು ನಾವು ಕೊಳ್ಳಬೇಕಾಗಿದೆ. ಇದನ್ನು ನೋಡಿ ಜನರಿಗೆ ಬೇಡವಾದ ಗೋವಿನಜೋಳವನ್ನೆಲ್ಲ ಕಡಿಮೆ ಬೆಲೆಯಲ್ಲಿ ಸಂಗ್ರಹಿಸಿ ತಿರುಗಿ ಸರಕಾರಕ್ಕೆ ಪೂರೈಸುವ ಹೊಸ ಧಂದೆಯನ್ನು ಪ್ರಾರಂಭಿಸಬೇಕೆಂದು ನನಗನಿಸಹತ್ತಿದೆ! ಇದರಿಂದ ಪರದೇಶದಿಂದ ಪ್ರಯತ್ನಪಟ್ಟು ಹುಳುಕು ಗೋವಿನ ಜೋಳವನ್ನು ತರಿಸುವ ಸರಕಾರದ ತೊಂದರೆಯಾದರೂ ತಪ್ಪೀತಲ್ಲವೆ?

ಹುಬ್ಬಳ್ಳಿ —ಕಾರ್ಡುಹೀನ

× × ×

## ಕಮ್ಯುನಿಝಂನ ತಪ್ಪೆ?

ಮಹನೀಯರೇ:

ಮೊನ್ನೆ ಜುಲೈ ೫ರ "ಕರ್ಮವೀರ"ದಲ್ಲಿ ನೀವು ಕಮ್ಯುನಿಝಂನ ಪರಿಚಯ ಮಾಡಿಕೊಟ್ಟಿದ್ದರಲ್ಲಿ ಆ ತತ್ವಜ್ಞಾನವನ್ನು ಅನ್ಯಾಯವಾಗಿ ದೂರಿದ್ದೀರೆಂದು ನನ್ನ ಮತ. ರಶಿಯದಲ್ಲಿ ಲೆನಿನ್ನನು ಕಮ್ಯುನಿಸ್ಟ ರಾಜ್ಯವನ್ನು ಒಂದು ಗುಂಡು ಹಾರಿಸದೆ ಸ್ಥಾಪಿಸಿದ್ದನು. ಆದರೆ ೧೪ ರಾಷ್ಟ್ರಗಳು ಅಕಾರಣವಾಗಿ ಅದನ್ನು ಮುತ್ತಿದ್ದಲ್ಲದೆ ಅಲ್ಲಿ ಯಾದವೀಯುದ್ಧವನ್ನೂ ಪ್ರಚೋದಿಸಿದವು. ನಮ್ಮ ಚರ್ಚಿಲ್ ಸಾಹೇಬರು ಪಾರ್ಲಮೆಂಟನ್ನು ಕೇಳದೆ ೧ ಲಕ್ಷ ಪೌಂಡುಗಳನ್ನು ರಶಿಯದ ಶತ್ರುಗಳಿಗೆ ಕೊಟ್ಟರು. ಲೆನಿನ್‌ನ ಬೆಂಬಲಕ್ಕಿದ್ದ ಉದಾರ ಧೋರಣೆಯ ಕಮ್ಯುನಿಸ್ಟರ ಬಲತಪ್ಪಿ ಅಂದಿನ ಗಂಡಾಂತರವನ್ನು ದೂರ ಮಾಡಲು ಸಮರ್ಥರಾದ ಕ್ರೂರ ಸ್ಟಾಲಿನವಾದಿಗಳ ಪ್ರಸ್ಥ ಬೆಳೆಯಿತು. ಈಗ ರಶಿಯದಲ್ಲಿರುವದು ಕಮ್ಯುನಿಝಂ ಅಲ್ಲ; ಅದರ ವಿಕೃತಿ.

ವಿಜಾಪುರ —ಓರ್ವ ಮಾರ್ಕ್ಸವಾದಿ

(ಕಮ್ಯುನಿಝಂನಲ್ಲಿರುವ ಮೂಲಭೂತ ದೋಷವೇ ರಶಿಯಾದ ವಿಕೃತ ಕಮ್ಯುನಿಝಂಗೆ ಕಾರಣವಾಗಿದೆಯೆಂದು ನಾವು ಇನ್ನೂ ಸಾಧಿಸುತ್ತೇವೆ. ಬಾಹ್ಯಗಂಡಾಂತರವಿದ್ದಷ್ಟು ಕಾಲ ರಶಿಯನ್ ನಾಯಕರು ಕೈಕೊಂಡ ಕ್ರಮಗಳು ಕ್ಷಮ್ಯವಾಗಿರಬಹುದು. ಆದರೆ ಅದರ ನಂತರದ ದಬ್ಬಾಳಿಕೆಗೆ "ಕೂಲಿಕಾರ ಸರ್ವಾಧಿಕಾರ" ಮತ್ತು "ಬಡವರು ಸತ್ಯ ನ್ಯಾಯಗಳೆನ್ನುತ್ತ ಕುಳಿತರೆ ಸಾಗದು" ಎಂಬ ಕಮ್ಯುನಿಸ್ಟ ಸಿದ್ಧಾಂತಗಳೇ ಮೂಲವಾದವು. ಸ್ಟಾಲಿನ್ನರನ್ನು ದೂರಿ ಫಲವಿಲ್ಲ. ಕಮ್ಯುನಿಝಂನಲ್ಲಿ ಅಧಿಕಾರಲಾಲಸೆಗೆ ತಡೆಯಿಲ್ಲದ್ದೇ ಈ ಸ್ಥಿತಿಗೆ ಕಾರಣ.) —ಸಂ

# ವಿವಿಧ ಪ್ರಪಂಚ

## ಕಾರಾಗೃಹ ಮತ್ತು ಕಾಮ

Civilized Barbarism— ನಾಗರಿಕ ಅನಾಗರಿಕತೆ ಪಾಶವೀ ಕ್ರೌರ್ಯಕ್ಕಿಂತಲೂ ಅಧಮತರವೆಂಬುದಕ್ಕೆ ಇಂದು ಹಲವು ಉದಾಹರಣೆಗಳು ಸಿಗುತ್ತವೆ. ಅವುಗಳಲ್ಲಿ ಮುಖ್ಯವಾದುದೆಂದರೆ ಮಾನವ ಪ್ರಾಣಿಗೆ ಕಾಮಕೆರಳಿಸಿ ಕಾಮವಸ್ತು ಸಿಗದಂತೆ ಮಾಡುವ ಅಪೂರ್ವ ರೀತಿಯ ಚಿತ್ರಹಿಂಸೆ. ಆಹಾರ, ನಿದ್ರೆ, ಭಯ ಮೈಥುನಗಳು ಮನುಷ್ಯನಿಗೂ ಪ್ರಾಣಿಗಳಿಗೂ ಸಮಾನವಾದ ಪ್ರಾಣಿಧರ್ಮಗಳು. ಹೀಗಿರುವಲ್ಲಿ ಕಾಮಪ್ರವೃತ್ತಿಯನ್ನು ದೀರ್ಘಕಾಲ ಅತೃಪ್ತಸ್ಥಿತಿಯಲ್ಲಿಡುವವದು ಅಮಾನುಷ ಎಂಬುದನ್ನು ಬರ್ಟ್ರಾಂ ಪೋಲನ್ಸ್, ವಿಕ್ಟರ್ ನೆಲ್ಸನ್, ಜೋಸೆಫ್ ಫಿಷ್‌ಮನ್ ಮತ್ತು ಹ್ಯಾವ್‌ಲಾಕ್ ಎಲ್ಲಿಸ್ ಮುಂತಾದ ಪ್ರಸಿದ್ಧ ಬರಹಗಾರರು ತಮ್ಮ ಪ್ರಬಂಧಗಳಲ್ಲಿ ಸೋದಾಹರಣವಾಗಿ ವಿವರಿಸಿದ್ದಾರೆ. ಕಾಮುಜೀವನ ಸ್ತ್ರೀಪುರುಷರಿಬ್ಬರಿಗೂ ಸಮಾನವಾಗಿ ಅಗತ್ಯವೆಂದೂ ಕಾರಾಗೃಹಗಳನೇಕವನ್ನು ಪರಿಶೀಲಿಸಿದಾಗ ತನಗೆ ಅನೇಕ ಕಡೆ ಅಲ್ಲಿಯ ಸ್ತ್ರೀಪುರುಷರು ಕಾಮತೃಪ್ತಿಗೆ ಅವಕಾಶವಿಲ್ಲದೆ ನಾನಾವಿಧವಾದ ದುರಾಚಾರಗಳಿಗೆ ಬಲಿಯಾದುದು ಗಮನಕ್ಕೆ ಬಂತೆಂದೂ ಅಮೇರಿಕದಲ್ಲಿ ಕಾರಾಗೃಹಗಳ ಫೆಡರಲ್ ಇನ್ಸ್‌ಪೆಕ್ಟರರಾಗಿದ್ದ ಫಿಷ್‌ಮನ್ ಬರೆಯುತ್ತಾನೆ.

ಮಾನವನಲ್ಲಿಯ ಸೈತಾನನು ಮಾಯೂ ಹೀತಿಯಾಗಿ ಅವತಾರತಾಳಿದ ಕೂರ್ಪಣಖೆಯಂತೆ ನಾಗರಿಕ ಉಡುಪನ್ನು ಧರಿಸಿ ನಿಂತಷ್ಟು ಘೋರ ಘೋರತರ ಅಮಾನುಷ ಹಿಂಸೆಗೆ ತಯಾರಾಗುತ್ತಾನೆ. ಇಂಥ ಮಾಯಾ ಮೃಗ ಸದೃಶ ಪ್ರವೃತ್ತಿಗಳನ್ನು ಕಂಡಲ್ಲಿ ಪ್ರತಿಭಟಿಸದಿದ್ದರೆ ಪ್ರಪಂಚದಲ್ಲಿ ಸಭ್ಯರಿಗೆ ಅಸ್ತಿತ್ವಕ್ಕೇ ಎಡೆಯಿರದಷ್ಟು ಸೈತಾನೀ ಕಾರಭಾರ ನಡೆದೀತಲ್ಲವೇ?

## ವಿದ್ಯಾವಂತರಲ್ಲಿ ವಿವಾಹವಿಚ್ಛೇದ

ವಿದ್ಯೆ ವಿವಾಹ ಭಂಗಕ್ಕೆ ಕಾರಣವಾಗುವುದೇ? ಎಂಬ ಪ್ರಶ್ನೆಯನ್ನು ಉತ್ತರಿಸಲು ಚಿಕಾಗೋ ವಿಶ್ವವಿದ್ಯಾಲಯದ ಪ್ರೊ. ವಿಲಿಯಂ ಅಗ್‌ಬರ್ನರು ಲೆಕ್ಕ ತೆಗೆದುಕೊಂಡಾಗ ಕೆಳಗಿನ ಫಲಿತಾಂಶ ಲಭಿಸಿತು.

೪ ನೆಯ ಇಯತ್ತೆಯೊಳಗಿನ ವಿದ್ಯಾವಂತರಲ್ಲಿ ಸಾವಿರಕ್ಕೆ ೧೭ ಗಂಡಸರೂ ೨೬ ಹೆಂಗಸರೂ ಸೋಡಚೀಟಿ ವ್ಯವಹಾರಕ್ಕೆ ಬಿದ್ದವರು. ೭–೮ ನೆಯ ಇಯತ್ತೆಯವರಲ್ಲಿ ಸಾವಿರಕ್ಕೆ ೧೯ ಗಂಡಸರೂ ೨೭ ಹೆಂಗಸರೂ ವಿಚ್ಛೇದ ಪಡೆದವರು. ಹೈಸ್ಕೂಲುವಿದ್ಯಾರ್ಥಿತ್ವ ಮುಗಿಸಿದವರಲ್ಲಿ ಸಾವಿರಕ್ಕೆ ೨೦ ಜನ ಗಂಡಸರೂ ೩೭ ಜನ ಹೆಂಗಸರೂ ಹಾಗೆ ಮಾಡಿದವರು.



ಹೊಸ ಬಗೆಯ ಜೀಪ್‌ಕಾರು. ಇದರ ಬಳಕೆ ಈಗ ಬಹಳ ಹೆಚ್ಚಾಗುತ್ತಿದೆ. ಇವನ್ನು ಇಂಗ್ಲೆಂಡಿನ ಪಫೀಲ್ಡ ಮೆಂಕ್ಕಾನಿ ಜೋಕನ್ಸವರು ತಯಾರಿಸುತ್ತಿದ್ದಾರೆ.

ಈ ಮಾತಿಗೆ ಅತ್ಯಾಧುನಿಕ ದೃಷ್ಟಾಂತವನ್ನಾಗಿ ಈ ಅರ್ನಾಲ್ಟ್ ರಾಬರ್ಟಸನ್ ಎಂಬಾಕೆ ತನ್ನ ಉತ್ತರ ಆಫ್ರಿಕದ ಭಾಷಣ ಪ್ರವಾಸದಲ್ಲಿ ಕಂಡ ಅನುಭವವನ್ನು ಸ್ಟೇಟ್ಸ್‌ಮನ್ ಅಂಡ ನೇಶನ್ ಪತ್ರಿಕೆಯ ಮೇ ೨೨ ರ ಪ್ರತಿಯಲ್ಲಿ ಪ್ರಕಟಿಸಿದ್ದನ್ನು ತೆಗೆದುಕೊಳ್ಳಬಹುದು. ಸುಮಾರು ೬೦೦೦ ಜರ್ಮನ್ ಬಂದಿಗಳನ್ನು ಈಜಿಪ್ಟಿನಲ್ಲಿ ಬ್ರಿಟಿಶರು ಬಂಧನದಲ್ಲಿ ಇಟ್ಟು ಆ ಯುವಕರನ್ನು ಹೆಚ್ಚಾಗಿ ಇಂಗ್ಲೀಷು ಮಹಿಳಾಧಿಕಾರಿಗಳ ಖಾಸಗಿ ಆಳಿನ ಕೆಲಸಕ್ಕೆ ಹಚ್ಚಿದ್ದಾರೆ. ೨೪ ತಾಸೂ ಆ ತರುಣರು ಆ ಹೆಂಗಸರ ಸ್ನಾನಪಾನಾದಿ ಸೇವೆಗಳಲ್ಲಿ ನೆರವಾಗಬೇಕು. ಅದರೆ ಅತ್ತ ಕಣ್ಣೆತ್ತಿದ್ದರೆ ಆ ಪಾರದರ್ಶಕ ಗೋಡೆಗಳ ಸಾಲ್ಮನೆಗಳಲ್ಲಿಯ ಮತ್ಸರಗ್ರಸ್ತ ಹೆಣ್ಣುಗಳು ದೂರು ಕೊಟ್ಟು ಅವರ ವಿಮೋಚನ ಕಾಲವನ್ನು ಬೆಳೆಸಬಹುದೆಂಬ ಹೆದರಿಕೆ. ಅದುದರಿಂದ ಆ ಹೆಂಗಳಲ್ಲಿ ಕೆಲವರು ಯುವಕರಲ್ಲಿ ಕರುಣ ಪ್ರೀತಿಗಳನ್ನು ತೋರಬೇಕೆಂದರೂ ಅಸಾಧ್ಯ. ಹಾಗೆ ತೋರಿದರೆ ಅವರ ಹುದ್ದೆಗೂ ಸಂಚಕಾರ ಬಂದೀತು ಈ ಪರಿಸ್ಥಿತಿಯಲ್ಲಿ ಸ್ವತಂತ್ರರಾದ ಆ ತರುಣಿಯರಿಗಿಂತ ಬಂದಿಗಳಾದ ಜರ್ಮನ್ ಯುವಕರ ಸ್ಥಿತಿ ದುಃಸಹವೆಂದು ಮೇಲಿನ ವಿದುಷಿ ಕನಿಕರದಿಂದ ಬರೆಯುತ್ತಾಳೆ. ಇದೇ ಅಭಿಪ್ರಾಯವನ್ನು ಹತ್ತಿರದಲ್ಲಿರುವ ಫ್ರೆಂಚರು ಕೂಡ ಸಮರ್ಥಿಸಿ ಆಂಗ್ಲರನ್ನು ಟೀಕಿಸುತ್ತಾರೆ. "ನಾವು ಇಂಥ ಹಿಂಸೆಯನ್ನು ಯಾರಿಗಾದರೂ ಕೊಟ್ಟಿದ್ದರೆ ಎಲ್ಲರೂ ಬೈಯುತ್ತಿದ್ದರು. ಆಂಗ್ಲರು ಮಾಡಿದ್ದರಿಂದ ಅದೀಗ ಉತ್ತಮರನಯವಾದ ನಡತೆಯೆನಿಸಿಬಿಟ್ಟಿದೆ!" ಎಂದು ಅವರು ವ್ಯಂಗ್ಯೋಕ್ತಿಯಾಡುತ್ತಿರುವದಾಗಿ ಉಕ್ತ ವಿದುಷಿ ತಿಳಿಸಿದ್ದಾಳೆ.

ಕಾಲೇಜು ವಿದ್ಯಾಭ್ಯಾಸ ಪಡೆದವರಲ್ಲಿ ಸಾವಿರಕ್ಕೆ ಕೇವಲ ೧೩ ಗಂಡಸರೂ ೩೩ ಹೆಂಗಸರೂ ಸೋಡಚೀಟಿಗೆ ಶರಣಾದವರು.

ಇದರಿಂದ ತಿಳಿಯುವುದೇನೆಂದರೆ— ಅಲ್ಪಜ್ಞ ಮತ್ತು ವಿಶೇಷಜ್ಞರಲ್ಲಿ ಮನಸ್ಸಿಗೆ ಭ್ರಮರ ಬುದ್ಧಿ ಕಡಿಮೆ; ಅರ್ಧಜ್ಞರಲ್ಲಿ ಮನಸ್ಸು ಹೆಚ್ಚು ಚಂಚಲವಿದೆ ಎಂಬುದು. ಇದೇ ಮಾತನ್ನು ಭರ್ತೃಹರಿಯು—' ಅಜ್ಞರನ್ನು ಸುಲಭವಾಗಿ ಮತ್ತು ವಿಶೇಷಜ್ಞರನ್ನು ಸುಲಭತರವಾಗಿ ತೃಪ್ತಿಪಡಿಸಬಹುದು; ಅದರೆ ಜ್ಞಾನಲವ ದುರ್ವಿದಗ್ಧರನ್ನು ಬ್ರಹ್ಮ ಕೂಡ ಸಮಾಧಾನಪಡಿಸಲಾರನು— ಎಂದು ವಿವರಿಸಿದ್ದಾನೆ.

## 'ಚಕ್ರದೃಷ್ಟಿ'

ತನ್ನ ದೋಷ ತನಗೆ ತಿಳಿಯುವುದು ಮತ್ತು ತನ್ನನ್ನು ಅನ್ಯರು ಹೇಗೆ ನೋಡುತ್ತಾರೆ ಎಂಬುದನ್ನು ಅರಿತುಕೊಳ್ಳುವುದು ಬಹಳ ಸುಲಭದ ಕೆಲಸವಲ್ಲ; ಅದರೆ ಬಹಳ ಕುತೂಹಲ ಕೆರಳಿಸುವ ಕೆಲಸ. ಅಮೇರಿಕದ ಬಗ್ಗೆ ಈ ಕೆಳಗಿನ ನಾಲ್ಕು ಅಭಿಪ್ರಾಯಗಳು ಹೇಗಿವೆ ಎಂಬುದನ್ನು ತಿಳಿದರೆ ಅಮೇರಿಕನ್ನರಿಗೆಷ್ಟು ಆಶ್ಚರ್ಯ ವಿಷಾದಗಳುಂಟಾಗಿರಬಹುದೆಂಬುದನ್ನು ಊಹಿಸಬಹುದು. ಏಕೆಂದರೆ ಅವರ ಪ್ರಕಾರ ಅವರಷ್ಟು ಸುಧಾರಿಸಿದ ಮುಂದಿಬೇರೆ ಯಾವ ದೇಶದಲ್ಲೂ ಇಲ್ಲ.

"ಸಂ. ರಾ. ಸಂಘದ ಒಬ್ಬ ಚೀನೀ ಪ್ರತಿನಿಧಿಯು ಒಮ್ಮೆ ನ್ಯೂಯಾರ್ಕಿಗೆ ಹೋದನು. ಸುದ್ದಿಗಾರರು ಅವನನ್ನು ಮುತ್ತಿದರು. 'ಅಮೇರಿಕದವರಲ್ಲಿ ನಿನಗೆ ಅತ್ಯಂತ ವಿಚಿತ್ರವೆನಿಸುವ ಸಂಗತಿಯಾವುದು?' ಎಂದು ಒಬ್ಬ ಅವನನ್ನು ಕೇಳಿದನು. ಅದಕ್ಕೆ ಉತ್ತರವಾಗಿ ಆ ಚೀನೀಯನು— ಅವರ ಕಣ್ಣಿನಲ್ಲಿ ಒಂದು ವಕ್ರತೆಯಿದೆ; ಅದೇ ಸ್ವಲ್ಪವಿಚಿತ್ರ, ವಿದೂಷ್ಯ— ಎಂದನು."

"ಅಮೇರಿಕದ ಗಂಡಸರಿಗೆ ಪ್ರೀತಿಸುವ ಕಲೆ ಗೊತ್ತಿಲ್ಲ" ಎಂದು ಒಂದು ಸಂದರ್ಭದಲ್ಲಿ ಒಬ್ಬಳು ಫ್ರೆಂಚ ಹೆಂಗಸು ದೃಢಸ್ವರದಿಂದ ನುಡಿದಳು; "ಅವರು ಒಲಿಸಿಕೊಳ್ಳದ ಮೊದಲೇ ಒಲಿಯಬೇಕೆಂಬವರು" ಎಂದು ಸೇರಿಸಿದಳು.

"ಒಬ್ಬ ಪ್ರಸಿದ್ಧ ಐರೋಪ್ಯನು ಅಮೇರಿಕದಲ್ಲಿ ಸುತ್ತಾಡಿ ಬಂದ ಬಳಿಕ ಅವನನ್ನು ಕಂಡ ಸುದ್ದಿಗಾರರು— ನಿಮಗೆ ಎಲ್ಲದಕ್ಕಿಂತ ಇಲ್ಲಿ ಯಾವುದು ಹೆಚ್ಚು ಮೆಚ್ಚುಗೆಗೆ ಪಾತ್ರವಾಯಿತು— ಎಂದು ಕೇಳಿದರು. ಅದಕ್ಕವನು ಅಲ್ಲಿಯ ಏಳು ನೆಲೆಯ ಉಪ್ಪರಿಗೆ ಮನೆ, ಬೃಹದಾಕಾರದ ಕಾರಖಾನೆ, ಪ್ರಾಕೃತಿಕ ಅದ್ಭುತ ದೃಶ್ಯ ಇವಾವವೂ ಹೆಸರಿಸದೆ, 'ಅಮೇರಿಕದ ನಗರಗಳಲ್ಲಿ ಬೀದಿಗಳಲ್ಲಿಟ್ಟಿರುವ (ಎಂಜಲು ತೊಟ್ಟಿ) ಕಸದ ಡಬ್ಬಿ' ಎಂದು ಉತ್ತರ ಕೊಟ್ಟನು."

"ಲೀ ಹಂಗ್‌ಚಾಂಗನು ಒಮ್ಮೆ ಹೇಳಿದ— ಚೀನದಲ್ಲಿ ಮದುವೆಯೆಂದರೆ ತಣ್ಣೀರನ್ನು ಉರಿವ ಒಲೆಯ ಮೇಲೆ ಇಟ್ಟ ಹಾಗೆ; ಬೇಗನೆ ಅದು ಕಾದು ಬಿಸಿಯಾಗಿ ಉಳಿಯುತ್ತದೆ. ಪಾಶ್ಚಾತ್ಯರಲ್ಲಿ ಹಾಗಲ್ಲ; ವಿವಾಹವು ಕುದಿ ಕುದಿ ನೀರನ್ನು ತಣಿಸೇರದ ಒಲೆಯ ಮೇಲಿಟ್ಟ ಹಾಗೆ; ಕೂಡಲೇ ಅದು ಆರಿ ಹೋಗುತ್ತದೆ."

## ಕಣ್ಣಿದ್ದ ಎದೆ

ಶಿವನಿಗೆ ಹಣೆಯಲ್ಲಿ, ಅರ್ಜುನನಿಗೆ ಬೆನ್ನಿನಲ್ಲಿ ಮತ್ತು ದೇವೇಂದ್ರನಿಗೆ ಮೈತುಂಬ ಕಣ್ಣಿದ್ದವೆಂದು ಪ್ರಸಿದ್ಧಿಯಿದೆ. ಅದರೆ ಅಮೇರಿಕದ ಆಧುನಿಕ ಪತಿವ್ರತೆಯೊಬ್ಬಳಿಗೆ ಎದೆಯಲ್ಲಿ ಕಣ್ಣಿದೆಯೆಂದು ಜೇಝೀ ಮೊಂಟೀನಾ ಬರೆಯುತ್ತಾಳೆ:

'ಒಂದು ಶನಿವಾರಸಂಜೆ ಪೇಟೆಯಲ್ಲಿ ಸಾಮಾನುಗಳನ್ನು ಕೊಳ್ಳುತ್ತಿದ್ದಾಗ ತರುಣಿಯೊಬ್ಬಳು ಉಡುಪಿನ ಬಟ್ಟೆಗಳನ್ನು ಹಿಡಿದುಕೊಂಡು ಪ್ರಸನ್ನಳಾಗಿ ಒಂದು ಅಂಗಡಿಯ ಕಟ್ಟೆಯ ಮೇಲೆ ಶತಪಥ ಹಾಕುತ್ತಿದ್ದುದನ್ನು ನೋಡಿದೆ. ನಾನು ಅತ್ತ ಲಕ್ಷ್ಯಕೊಟ್ಟುದನ್ನರಿತ ಅವಳು— ಈ ಯೆರಡು ಬಟ್ಟೆಗಳಲ್ಲಿ ಯಾವುದು ಉತ್ತಮವೆಂದು ಹೇಳಬಲ್ಲಿರಾ? ನನಗೆ ಅವುಗಳ ಬಣ್ಣ ಮುಖ್ಯವಲ್ಲ, ಅವು ಮಾಡುವ ಸಪ್ಪಳವೇ ಮುಖ್ಯ— ಎಂದಳು. ಬಟ್ಟೆಗೂ ಸಪ್ಪಳಕ್ಕೂ ಏನು ಸಂಬಂಧ ಎಂದು ತಿಳಿದು, ಎರಡರಲ್ಲಿ ಬಣ್ಣ ಚೆಲುವಾಗಿ ತೋರುವ ಬಟ್ಟೆಯನ್ನು ತೋರಿಸಿ ಅದನ್ನು ಕೊಳ್ಳುವುದೇ ಉತ್ತಮ ಎಂದು ಹೇಳಿದೆ. ಅದಕ್ಕವಳು— ನೋಡಿರಿ, ನಾನು ಮದುವೆಯಾಗಬೇಕೆಂದಿರುವ ವರ ಕುರುಡನು; ಅವನ ಸನಿಹದಲ್ಲಿ ನಾನು ಬಂದುದು ಅವನಿಗೆ ಗೊತ್ತಾಗಬೇಕಲ್ಲವೆ? ಅದರಿಂದಲೇ ನನಗೆ ಸದ್ದು ಹೆಚ್ಚು ಮಾಡುವ ಬಟ್ಟೆಯೇ ಬೇಕೆಂಥೆ— ಎಂಬುದನ್ನು ಕೇಳಿ, ಅವಳು ನಿಜವಾಗಿಯೂ ಎದೆಗಣ್ಣಳೆಂದುಕೊಂಡು ಸಂತಸಬಟ್ಟೆ.'

## ಧರ್ಮಾಂತರವಿಲ್ಲ

ಭಾರತದಲ್ಲಿ ವಿಧರ್ಮೀಯರ ವಿವಾಹವಾದರೆ ಹೆಂಗಸು ಗಂಡಸಿನ ಧರ್ಮವನ್ನು ಸ್ವೀಕರಿಸುವ ಪದ್ಧತಿಯಿದೆ. ಅದರಿಂದ ಧರ್ಮವೊಂದು ಆಟದ ವಸ್ತುವೆಂದು ತಿಳಿದವರ ನಡೆವಳಿಕೆ. ಚೀನದಲ್ಲಿ ಹಾಗಿಲ್ಲ. ರುಮೇನಿಯದ ಹಿಂದಿನ ರಾಜನಾದ ಮೈಕೇಲನು ಹಳೆಯ ಚರ್ಚಿನ ಅನುಯಾಯಿ ಇದ್ದು ಅವನನ್ನು ರೋಮನ್ ಕ್ಯಾಥೋಲಿಕಳಾದ ಬಾರ್ಬನ ಪಕ್ಷದ ರಾಜಕುಮಾರಿ ಆ್ಯನಳು ಧರ್ಮಾಂತರಹೊಂದದೆ ಮದುವೆಯಾದಳು. ಅರ್ಧಜ್ಞರಿಗೆ ಧರ್ಮವು ಶತ್ರುವಾಗಬಲ್ಲುದಲ್ಲದೆ ಮಿತ್ರನಾಗಲಾರದು. ಧರ್ಮದಲ್ಲಿ ಪ್ರಬುದ್ಧವ್ಯಕ್ತಿಯು ಒಂದು ನಿರ್ಣಯಕ್ಕೆ ಬಂದು ಮುಟ್ಟಿ ಅದರಂತೆ ಆಚರಿಸಿದರೆ ಮಾತ್ರ ಫಲವುಂಟಲ್ಲದೆ ಕೇವಲ ಪರಂಪರಾಗತ ಗತಾನುಗತಿಕ ಆಚಾರವಿಚಾರಗಳನ್ನಿಟ್ಟುಕೊಂಡರೆ ಲಾಭಕ್ಕಿಂತ ನಷ್ಟ ಹೆಚ್ಚು. ಹಾಗಿಟ್ಟುಕೊಂಡು ಸ್ವಧರ್ಮದಲ್ಲಿ ಉಳಿದವರು ವಿಧರ್ಮೀಯರೊಡನೆ ವಿವಾಹವಾದರೆ ತೊಂದರೆಯುಂಟು. ಆಚಾರ, ಶೀಲಗಳನ್ನು ಪರಸ್ಪರ ಸಹಿಸಿಕೊಳ್ಳಬಲ್ಲ ನಿಜವಾದ ಆಧುನಿಕ ನಾಗರಿಕ ಔದಾರ್ಯವುಳ್ಳವರಿಗೆ ಹಾಗೆಮಾಡಲು ಯಾವ ಅಭ್ಯಂತರವೂ ಇರಕೂಡದು. ಹೀಗಿರಲು ಶಕ್ಯವಿಲ್ಲದ ವಿಧರ್ಮೀಯ ದಂಪತಿಗಳು ಧರ್ಮಾತೀತರಾಗಿ ಸಾಮಾನ್ಯ ಮಾನವನೀತಿಗೆ ಶರಣಾಗಿ ಬಾಳಬೇಕು; ಇದಕ್ಕಿದೆ ಗತ್ಯಂತರವಿಲ್ಲ. ಸ್ವಧರ್ಮ ನಿಷ್ಠೆಯುಳ್ಳವರಲ್ಲಿ ಎಂದೂ ಧರ್ಮಾಂತರವಿಲ್ಲ. ಧರ್ಮನಿಷ್ಠೆ ನೆಲೆಸಿಲ್ಲದವರು ಎಷ್ಟು ಸಲ ಬೇಕಾದರೂ ಧರ್ಮಾಂತರ ಹೊಂದಬಹುದು; ಅವರಿಗೆ ಧರ್ಮವಿದ್ದರೂ ಇಲ್ಲದಂತೆಯೆ!

# ಅದ್ವಿತೀಯ ಅಮೇರಿಕೆಗೆ ಅಜ್ಞಾತ ಭಯ

**ಔದ್ಯೋಗಿಕ ಮತ್ತು ಸಾಮರಿಕ ಶಕ್ತಿಯಲ್ಲಿ ಎದುರಿಲ್ಲ ತನಗೆಂಬ ಅಮೇರಿಕೆಯಲ್ಲಿ ಹಬ್ಬಿದ ಅಜ್ಞಾತ ಭಯ ಮತ್ತು ಅದರ ಪರಿಣಾಮವಾಗಿ ಅಲ್ಲಿಯ ಸರಕಾರವೂ ರಾಜಕಾರಣಿಗಳೂ ಕೈಕೊಳ್ಳುತ್ತಿರುವ ಗಾಬರಿಬಡಕ ಕೃತ್ಯಗಳನ್ನು ಇಲ್ಲಿ ಪ್ರಸಿದ್ಧ ಅಮೇರಿಕನ್ ಸಮಾಜಶಾಸ್ತ್ರಜ್ಞರಾದ ಕೇರಿ ಮ್ಯಾಕ್‌ವಿಲಿಯಮ್ಸರು ವಿವೇಚಿಸಿದ್ದಾರೆ. ತಾವು ತಯಾರಿಸುತ್ತಿರುವ ಭಯಾನಕ ಶಸ್ತ್ರಾಸ್ತ್ರಗಳೇ ಅವರ ಭಯದ ಮೂಲವೆಂಬ ಮ್ಯಾಕ್‌ವಿಲಿಯಮ್ಸರು ಪಟ್ಟ ಅಭಿಪ್ರಾಯ ಮನನೀಯವಾಗಿದೆ. ಅಣು ಬಾಂಬು ಮೊದಲು ಬೆಳಕಿಗೆ ಬಂದಾಗ ಅದು ಸರ್ವಾಧಿಕಾರಕ್ಕೆ ಕಾರಣವಾಗುವದೆಂದು ಬಲ್ಲವರು ಒಡನುಡಿದಿದ್ದರು. ಸಂಶಯ ಭಯಗಳೇ ನಿರ್ದಯ ಸರ್ವಾಧಿಕಾರದ ಮೂಲ. ಅವು ಅಮೇರಿಕೆಯಲ್ಲಿ ಹಬ್ಬಿದ್ದು ಪ್ರಜಾತಂತ್ರಕ್ಕೆ ಘಾತಕವಾಗಿದೆ.**

೧೯೪೮ ರಲ್ಲಿ, ಜಗತ್ತಿನಲ್ಲೆಲ್ಲ ಅತ್ಯಂತ ಪ್ರಬಲ ರಾಷ್ಟ್ರವಾದ ಅಮೇರಿಕೆ, ಭಯದ ಸುಳಿಯಲ್ಲಿ ಸಿಲುಕಿದೆ. ಹತ್ತು ವರ್ಷದ ಅವಧಿಯಲ್ಲಿ ಅಮೇರಿಕೆಯ ಉತ್ಪಾದನ ಶಕ್ತಿ ಒಂದೂವರೆ ಪಟ್ಟು ಹೆಚ್ಚಿದೆ. ಆದರೆ ವಿಚಿತ್ರವೆಂದರೆ ಅದರ ಸಂಗಡ ಅಮೇರಿಕನ್ನರ ಭಯದ ಕಡಲೂ ಉಕ್ಕಿ ಬಂದುದು. ಇದು ಏತರ ಭಯವೆಂದು ಅವರು ಕಾಣಬಾರದಾಗಿದ್ದಾರೆ. ಇದೀಗ ಕಳವಳಜನಕ ಸಂಗತಿ.

## ಹೆಸರಿಲ್ಲದ ಭಯ

ಆಧುನಿಕ ಜಗತ್ತಿನ ಘಟೋತ್ಕಚನೆನಿಸಿದ ಅಮೇರಿಕೆ ಹೆಸರಿಲ್ಲದ ಭಯದಿಂದ ಗಡಗಡನೆ ನಡುಗುತ್ತಿದೆ. ಸಮಾಜಕ್ಕೆ ಸಮಾಜವೇ ಹೌಹಾರಿದಂತಾಗಿದೆ. ಯಾವ ಪತ್ರಿಕೆಯನ್ನೋದಿದರೂ ಇದಕ್ಕೆ ಉದಾಹರಣೆಗಳು ದೊರೆಯಬಹುದು. ಒಂದು ಪತ್ರಿಕೆಯ ವರದಿ ಹೀಗಿದೆ:

"ರಾಜಧಾನಿಯಲ್ಲಿ ನಿಷ್ಕ್ರಿಯೆ ಮುಸುಕಿದೆ. . . ಬೀದಿಯಲ್ಲಾರಾದರೂ ಮನಸಾರೆ ನಕ್ಕರೆ ಜನ ಅತ್ತ ಹೊರಳಿ ಬೆಚ್ಚುಗಣ್ಣಿನಿಂದ ದಿಟ್ಟಿಸುತ್ತಾರೆ. ಸರಕಾರಿ ನೌಕರರು ಕೂತಲ್ಲೆ ಚಡಪಡಿಸುತ್ತಾರೆ. ಸೇನಾಪತಿಗಳು ಪರಸ್ಪರರನ್ನು ದೂಷಿಸಿ ಮುಂದಿನ ಯುದ್ಧದಲ್ಲಿ ತಮ್ಮ ತಮ್ಮ ಸ್ಥಾನಗಳನ್ನು ಕುರಿತು ಅಡಿಕೊಳ್ಳುತ್ತಾರೆ. ವಿದೇಶ ಶಾಖೆಯ ಮುಖ್ಯ ಸಂರಕ್ಷಣಾಧಿಕಾರಿಯ ಮೇಲೆ,—ಅವನ ದೂರದ ನಂಟನೊಬ್ಬ ಎಂದೋ ಕಮ್ಯುನಿಸ್ಟರೊಡನೆ ಆಡ್ಡಾಡುತ್ತಿದ್ದುದರಿಂದ—ಸಂಶಯವನ್ನು ಇಡಲಾಗಿದೆ. . ."

ಲಾಸ್ ಏಂಜಲ್ಸ್ ನಗರ ಸಭೆಯ ೨೦,೦೦೦ ನೌಕರರ ದೇಶಭಕ್ತಿಯ ಪರೀಕ್ಷೆ ಮಾಡಬೇಕೆಂಬ ಸೂಚನೆಯ ವಿರುದ್ಧ ದೂರಿಕೊಳ್ಳಲು ಮೊನ್ನೆ ಮೊನ್ನೆ ನಗರ ಸಭಾಸದರ ಬಳಿಗೆ ಒಂದು ಶಿಷ್ಟಮಂಡಲ ಬಂದಿತ್ತು. ಯುದ್ಧಕಾಲದಲ್ಲಿ ಈ ನೌಕರರಲ್ಲಿ ಯಾರೊಬ್ಬರ ಮೇಲೂ ದೇಶದ್ರೋಹದ ಸಂಶಯ ಬಂದಿರಲಿಲ್ಲ. ಅಂದ ಮೇಲೆ ಶಾಂತಿ ಕಾಲದಲ್ಲೇಕೆ ಈ ಪರೀಕ್ಷೆ ?—ಎಂದು ಕೇಳಿದರೆ ಸದಸ್ಯರೊಬ್ಬರು ಸಿಟ್ಟಿಗೆದ್ದು ಹೇಳಿದ್ದು: "ಅವರಲ್ಲಿ ಒಬ್ಬನೇ ಒಬ್ಬ ಕಮ್ಯೂನಿಸ್ಟ್ ಪಿಶಾಚಿಯಿದ್ದರೂ ಅವನನ್ನು ರಶಿಯಕ್ಕೆ ಅಟ್ಟಿ ಬಿಡಬೇಕೆನ್ನುವವನು ನಾನು!" ಈ ಮನೋಭಾವದಲ್ಲಿ ನ್ಯಾಯವಿವೇಕವೆಲ್ಲಿ ಬರಬೇಕು ?

ದೇಶದ ಭದ್ರತೆಯ ಚಿಂತೆ ನ್ಯಾಯವಾದದ್ದೆ. ಆದರೆ ಈ ಭೀತ ಮನೋಭಾವವನ್ನು ನೋಡಿದರೆ ಉದ್ವೇಗವಾಗುತ್ತದೆ. ಭದ್ರತೆಯೆಂಬ ಒಂದು ಹುಚ್ಚೇ ಹೆಚ್ಚಿಕೊಂಡುಬಿಟ್ಟಿದೆ. ಯಾತಕ್ಕಾಗಿ ಭದ್ರತೆ? ಯಾತರ ವಿರುದ್ಧ ಭದ್ರತೆ? ಯಾತರ ಮೂಲಕ ಭದ್ರತೆ! ಯಾರಿಗೂ ಗೊತ್ತಿದ್ದಂತಿಲ್ಲ.

ಅಮೇರಿಕೆಯ ಪಶ್ಚಿಮ ತೀರದಲ್ಲಿ "ನಿಗೂಢ ಯೋಜನೆ" ಗಳ ಸುದ್ದಿ ದಿನವೂ ಕೇಳಬರುತ್ತದೆ. ಆದರೆ ಅದರ ಸುತ್ತೆಲ್ಲ ಗಪ್‌ಚುಪ್! ಅದರ ಸುದ್ದಿ ತೆಗೆಯಬಾರದು. ಈ ಯೋಜನೆಗಳಲ್ಲಿ ನಿಯುಕ್ತರಾಗಿರುವ ಉಚ್ಚ ಅಧಿಕಾರಿಗಳಿಗೆ ಕೂಡ ಅಲ್ಲಿ ನಡೆಯುವ ಭಯಾನಕ ಸಂಶೋಧನೆಗಳ ತಲೆ ಬುಡ ಗೊತ್ತಿದ್ದಂತಿಲ್ಲ.

## ಸೆರೆಮನೆಯಲ್ಲಿ ವೈಜ್ಞಾನಿಕರು

ಕೆಲಿಫೋರ್ನಿಯದ ತಾಂತ್ರಿಕ ಸಂಸ್ಥೆಯಲ್ಲಿ ಭಾಷಣ ಕೊಡಹೋದವರೊಬ್ಬರು, ಆ ಸಂಸ್ಥೆಯನ್ನು ಸೆರೆಮನೆಯಂತೆ ಪೋಲೀಸರು ಕಾಯುತ್ತಿರುವದನ್ನು ಕಂಡರು. ಅಲ್ಲಿ ಕೆಲಸ ಮಾಡುತ್ತಿರುವ ವೈಜ್ಞಾನಿಕರಿಗೆ ತಾವು ಸೆರೆಯಾಳುಗಳೆಂದೇ ಎನಿಸತೊಡಗಿದೆ. ಅವರು ರೂಪಿಸುತ್ತಿರುವ ತಂತ್ರ ಪ್ರಕ್ರಿಯೆಗಳನ್ನು ಅವರು ಕನಸಿನಲ್ಲಿ ಸಹ ಕಾಣದವರು ಅವರ ಮನಸಿಗೆ ಸರ್ವಥಾ ಒಪ್ಪದ ಉದ್ದೇಶಗಳಿಗೆ ಉಪಯೋಗಿಸಬಹುದು. ಇಂಥ ಭೀಕರ ಸಂಶೋಧನೆಗಳವೆಯೆಂದು ಎಲ್ಲರಿಗೂ ಗೊತ್ತು. ಆದರೆ ಅದರ ಸುತ್ತ ನಿಗೂಢತೆಯ ಮುಚ್ಚಳ. ಭೀತಿಯ ವಾತಾವರಣಕ್ಕೆ ಇದಕ್ಕಿಂತ ಹೆಚ್ಚಿನ ಪೋಷಣೆ ಬೇಕೆ?

ನಿಜವಾಗಿ ಯಾತರ ಭಯವಿದು? 'ರಶಿಯಾ' 'ಕಮ್ಯುನಿಝಂ', 'ಕೆಂಪು ಫ್ಯಾಸಿಝಂ' ಎಂದು ಪತ್ರಿಕೆಗಳು ಕಿರಿಚುತ್ತವೆ. ರಶಿಯಾದ ಭಯ ನಿಜವಾಗಿದ್ದರೆ, ಅಮೇರಿಕೆಯ ನಾಗರಿಕರಲ್ಲಿ ಪರಸ್ಪರರ ದೇಶಭಕ್ತಿ, ವಿಶ್ವಾಸ್ಯತೆಗಳ ಮೇಲೆ ಅಳತೆಗೆಟ್ಟು ಸಂಶಯಗಳನ್ನು ಹುಟ್ಟಿಸುವದು ಜಾಣತನದ ಮಾತೆ?

ರಶಿಯವಾಗಲಿ ಕಮ್ಯೂನಿಝಂ ಆಗಲಿ ಜಗತ್ತಿನಲ್ಲಿ ಇದ್ದಿಲ್ಲವಾದರೂ ಇಂದಿನ ಸ್ಥಿತಿಯಲ್ಲಿ "ಬಾಹ್ಯ" ಮತ್ತು "ಆಂತರಿಕ" ಶತ್ರುಗಳನ್ನು ಎಲ್ಲಿಂದಾದರೂ ನಾವು ಸೃಷ್ಟಿಸಿಕೊಳ್ಳಲೇ ಬೇಕಾಗುತ್ತಿತ್ತೇನೋ.

"ಬಾಹ್ಯ" ಶತ್ರುವಿನ ಭಯದಿಂದ ಅದೇ ಬಗೆಯ "ಆಂತರಿಕ" ಶತ್ರುವಿನ ಉದಯವಾಗುತ್ತದೆ. ೧೦ 'ಅವಿಧೇಯ' ನೌಕರರನ್ನು ಹೊರಗೆ ಹಾಕಿದರೆ ೨೦ ಜನರನ್ನು ಹೊರಗೆ ಹಾಕಬೇಕೆಂದು ಕೂಗೇಳುತ್ತದೆ. ದೇಶಭಕ್ತಿಯ ವಿಷಯದಲ್ಲಿ ಸಂದೇಹಕ್ಕೆ ಗುರಿಯಾದ ಒಬ್ಬನು ನಿರಪರಾಧಿಯೆಂದು ಸಿದ್ಧವಾದರೆ ಅವನ ವಿಚಾರಣೆ ನಡೆಸಿದವರೇ ದೇಶದ್ರೋಹಿಗಳಿರಬೇಕೆಂಬ ಸಂದೇಹಕ್ಕೆ ಎಡೆಯಾಗುತ್ತದೆ. ಇದರಿಂದ ಒಂದು ಗುಂಪು ಒಳಗಿಂದೊಳಗೆ ಇನ್ನೊಂದು ಗುಂಪಿನ ಗುಟ್ಟುಗಳನ್ನು ಕಂಡುಹಿಡಿಯಲು ಹೆಣಗುತ್ತದೆ. ಇಡಿ ವಾತಾವರಣವೇ ಸಂಶಯಗ್ರಸ್ತವಾಗುತ್ತದೆ. ಆಗ ಯೋಚಿಸಲು, ಬರೆಯಲು, ಸಂಭಾಷಿಸಲು ಕೂಡ ಹೆದರುವ ಸ್ಥಿತಿಯಾಗುತ್ತದೆ. ಸರ್ವಾಂತರ್ಯಾಮಿ "ಗುಪ್ತಚಾರ" ನು ನೋಡಿದರೆ, ಕೇಳಿದರೆ ಏನು ವಿಪತ್ತು ಮೇಲೆ ಬರುವದೋ ಎಂದು ನ್ಯಾಯಾಧೀಶರೂ ವಿವೇಕಗೆಟ್ಟರು.

ಈಚೆಗೆ ವಿದೇಶ ಖಾತೆಯವರು ಹತ್ತು ಜನರ ಮೇಲೆ ಸಂಶಯವಿಟ್ಟು ವಿಚಾರಣೆ ನಡೆಸಿದರು. ಆರೋಪಿಗಳಿಗೆ ಅವರ ಅಪರಾಧಗಳೇನೆಂದು ಅವರು ತಿಳಿಸಲಿಲ್ಲ. ನಿಜವಾಗಿ ಆರೋಪಕರಿಗೇ ಅವೇನೆಂದು ಸರಿಯಾಗಿ ಗೊತ್ತಿದ್ದಿಲ್ಲ. ಆರೋಪಿಗಳು ಕತ್ತಲಲ್ಲಿ ಕಾಲು ಹಾಕುವವರಂತೆ ಎಡವುತ್ತ ಮುಗ್ಗರಿಸುತ್ತ ಏನು ಹೇಳಬೇಕೆಂದು ಗೊತ್ತಿಲ್ಲದೆ ಒದ್ದಾಡಿದರು. ಆರೋಪಕರೂ ಏನು ಆರೋಪಿಸಬೇಕೆಂದರಿಯದೆ ಮೂಕರಾಗಿ ಕುಳಿತಿದ್ದರು.

ಅಮೇರಿಕೆಯ ಅಣುಶಕ್ತಿಯ ಸಮಿತಿಯ ಅಧ್ಯಕ್ಷ ಡೆವಿಡ್ ಲಿಲಿಂಥಾಲರು ಯಹೂದ್ಯರಾಗಿರುವದರಿಂದ ದೇಶದ ಭದ್ರತೆಗೆ ಗಂಡಾಂತರವುಂಟೆಂದು ಈಚೆಗೆ ಒಂದು ಕರಪತ್ರ ಕಿರಿಚಿಕೊಂಡಿತು.

ಮೊನ್ನೆ ಒಂದಾನೊಂದು ಆಸ್ತಿಯ ವಿಷಯದಲ್ಲಿ ರಶಿಯದಲ್ಲಿರುವ ಅದರ ಉತ್ತರಾಧಿಕಾರಿಯ ಪರವಾಗಿ ರಶಿಯನ್ ರಾಯಭಾರಿ ಮಾಡಿದ ಅರ್ಜಿಯನ್ನು ನ್ಯಾಯಾಧೀಶನೊಬ್ಬ ತಿರಸ್ಕರಿಸಿದ. ಕಾಯದೆ ಒಪ್ಪಂದಗಳೆರಡನ್ನೂ ಲೆಕ್ಕಿಸದೆ ರಶಿಯನ್ನರನ್ನು ಸಿಕ್ಕಂತೆ ನಿಂದಿಸ... ನಲ್ಲದೆ ಅಮೇರಿಕನ್ನನಾಗಿದ್ದೂ ರಶಿಯನ್ನ... ಬಗ್ಗೆ ವಾದಿಸಲು ಬಂದಿರುವೆಯಲ್ಲಾ ಎಂ... ವಕೀಲನನ್ನು ಜರೆದನಾ ನ್ಯಾಯಾಧೀಶ. ಇಂ... ನ್ಯಾಯಾಧೀಶರಿಂದ ಎಂಥ ನ್ಯಾಯವನ್ನು ನಿರೀಕ್ಷಿಸಬಹುದು ?

ದಕ್ಷಿಣ ಪ್ರದೇಶದಲ್ಲಿ ಯುದ್ಧಾನಂತರ ತಿರು... ನಿಗ್ರೋಗಳನ್ನು ಪೀಡಿಸುವ ಸತ್ರ ಪ್ರಾರಂಭ... ವಾಗಿದೆ. ಮೊನ್ನೆ ರಿಟ್ಸ್‌ವಿಲ್ ನಗರದ ೪೦೦ ನಿಗ್ರೋ ಮತದಾರರಿಗೆ ನಿಗ್ರೋ ವೈರಿ ಬಿ... ದರ ತಂಡವಾದ ಕು-ಕ್ಲಕ್ಸ್-ಕ್ಲಾನಿನವರು ಬಹಿ... ರಂಗವಾಗಿ ಭಯಪ್ರದರ್ಶನ ಮಾಡಿದ್ದರಿಂ... ಅವರು ಮತಗಟ್ಟೆಗಳಿಗೆ ಬರಲು ಧೈರ್ಯಗ... ಲಿಲ್ಲ.

ಈ ಎಲ್ಲ ಉದ್ಭ್ರಾಂತ ಕೃತ್ಯಗಳಿಗೆ ಕಾರಣವೇನು? ದೇಶದಲ್ಲಿ ಯಾವುದಾದರೊಂದು ಬಿಕ್ಕಟ್ಟು ಒದಗಿದಾಗ ಒಗ್ಗಟ್ಟು ಮುರಿಯುವಂತೆ ಕಂಡಾಗ ಬಹುಸಂಖ್ಯಾಕರಿಗೆ ಯಾರಾದರೊಬ್ಬ 'ಶತ್ರು' ಬೇಕಾಗುತ್ತಾನೆ. ಒಮ್ಮೆ ನಿಗ್ರೊ, ಇನ್ನೊಮ್ಮೆ ಜಪಾನಿ, ಮತ್ತೊಮ್ಮೆ ಯೆಹೂದ್ಯ, ಈಗ ಕಮ್ಯುನಿಸ್ಟ, ಯಾರಾದರೊಬ್ಬರ ಮೇಲೆ 'ದ್ವೇಷ' ದ ಸತ್ರ ಪ್ರಾರಂಭವಾಗುತ್ತದೆ. ಅದರಿಂದ ಪ್ರಗತಿ ಕುಂಠಿತವಾಗುತ್ತದೆ. ಇದು ಅಮೇರಿಕೆಯಲ್ಲಿ ಮೊದಲಿನಿಂದಲೂ ಇದ್ದ ಪರಂಪರೆ. ಅಲ್ಪಸಂಖ್ಯಾಕರನ್ನು ದ್ವೇಷಿಸುದರವಲ್ಲಿ ಬಹುಸಂಖ್ಯಾಕರು ಐಕ್ಯವನ್ನು ಸಂಪಾದಿಸಬಯಸುತ್ತಾರೆ.

## ಭಯದ ಮೂಲ

ಆದರೆ ನನ್ನ ನಂಬಿಕೆ ಬೇರೆಯೆ ಇ... ಆದಕ್ಕೆ ನಾನು ಪ್ರಮಾಣ ಕೊಡಲು ಸಮರ್ಥನಾಗದಿರಬಹುದು. ಅಣುಬಾಂಬು ಮತ್ತು ಅದಕ್ಕೂ ಭೀಕರವಾದ ನಾವು ನಿರ್ಮಿಸು...

—೧೩ನೆಯ ಪುಟಕ್ಕೆ

## ದಿಲ್ಲಿಯ ನಿರಾಶ್ರಿತ ಶಿಬಿರದಲ್ಲಿ—

ಕಿಂಗ್ಸ್‌ವೇ ನಿರಾಶ್ರಿತ ಶಿಬಿರದ ಪಂಜಾಬ ನಿರಾಶ್ರಿತರು ತಮ್ಮ ವಸತಿಗಾಗಿ ತಾವೇ ಚಾಳುಗಳನ್ನು ಕಟ್ಟುತ್ತಿರುವರು.



ನಿರಾಶ್ರಿತ ಶಿಬಿರಗಳಲ್ಲಿ ಹೆಂಗಸರು-ಗಂಡಸರು, ಮುದುಕರು ಮಕ್ಕಳೆನ್ನದೆ ಈ ವಸತಿ ಸೌಕರ್ಯ ನಿರ್ಮಾಣ ಕಾರ್ಯದಲ್ಲಿ ಕೈಕೊಂಡಿದ್ದಾರೆ. ಎಡಗಡೆ ಚಿಕ್ಕಮಕ್ಕಳ ಕಾರ್ಯಾಸಕ್ತಿಯನ್ನು ಕಾಣಬಹುದು. ಬಲಗಡೆ ವಸತಿಗಳಿಗಾಗಿ ಇಟ್ಟಿಗೆ ಹೊಡೆಲಾದವುಗಳನ್ನು ಸಾಗಿಸುತ್ತಿರುವ ನಿರಾಶ್ರಿತರು.

# ವ್ಯಾಪಾರ ಪ್ರಪಂಚ

## ಮುಂಬಯಿ ಶೇರ ಪೇಟೆ

ತಾ. ೮

ಕಳೆದ ವಾರದ ಇಳಿ ಧೋರಣೆಯಿಂದ ಈಗ ತಿರುಗಿ ಶೇರಪೇಟೆ ಮೇಲೇರತೊಡಗಿದೆ. ಟಾಟಾ ಪಾಲುಗಳ ಮೇಲೆ ಡಿವಿಡೆಂಡು ಕಡಿಮೆಯಾಗುವದೆಂಬ ಸುದ್ದಿಗೆ ಆಧಾರವಿಲ್ಲೆಂದು ತಿಳಿದು ಬಂದದ್ದರಿಂದಲೂ ಕೂಲಿಕಾರರಿಗೆ ಲಾಭದಲ್ಲಿ ಪಾಲು ಕೊಡಬೇಕೆಂಬ ಸರಕಾರದ ಸಂಕಲ್ಪಕ್ಕೆ ಅಷ್ಟೇನೂ ಬೆಂಬಲ ದೊರೆಯುವ ಸಂಭವವಿಲ್ಲವೆಂದು ಗೊತ್ತಾದುದರಿಂದಲೂ ತಾ. ೧೯ಕ್ಕೆ ಸೇರಲಿರುವ ಜವಳಿ ಬೋರ್ಡಿನವರು ಗಿರಣಿಗಳ ವಿಷಯದಲ್ಲಿ ಯಾವ ಧೋರಣೆಯನ್ನು ವ್ಯಕ್ತಗೊಳಿಸಬಹುದೆಂಬದು ತಿಳಿದಿಲ್ಲವಾದದುರಿಂದಲೂ ಪಾಲುಗಳ ಮೇಲೆ ಎದುರು ಬದುರು ಪರಿಣಾಮವಾಗಿದೆ. ಇಂದಿನ ಬೆಲೆಗಳು ಹೀಗಿದ್ದವು:

### ಜವಳಿ

| | |
|---|---|
| ಅಹಮದಾಬಾದ ಅಡ್ವಾನ್ಸ | ೨೭೫—೦—೦ |
| ಬಾಂಬೆ ಡಾಯಿಂಗ್ | ೧೦೮೭—೮—೦ |
| ಸೆಂಟ್ರಲ ಇಂಡಿಯಾ | ೨೯೦—೦—೦ |
| ಸೆಂಚುರಿ | ೫೧೨—೦—೦ |
| ಗೋಕಾಕ | ೩೧೨—೦—೦ |
| ಕೋಹಿನುರು | ೬೩೬—೮—೦ |
| ಫಿನಿಕ್ಸ | ೪೪೧—೪—೦ |
| ಸಿಂಪ್ಲೆಕ್ಸ | ೨೧೭—೦—೦ |
| ಸ್ವದೇಶಿ | ೬೦೯—೦—೦ |

### ಇತರ

| | |
|---|---|
| ಬೇಲಾಪುರ ಸಕ್ಕರೆ | ೩೧೫—೦—೦ |
| ಬಾಂಬೇ ಬರ್ಮಾ | ೪೨೭—೮—೦ |
| ಸಿಂಧ್ಯ ಸ್ಟೀಮ | ೨೭—೯—೦ |
| ಟಾಟಾ ಸ್ಟೀಲ ಡೆಫರ್ಡ | ೧೬೨೦—೦—೦ |
| ಇಂಡಿಯನ್ ಆಯರ್ನ | ೨೭—೪—೦ |
| ಅಸೊ. ಸಿಮೆಂಟ್ಸ | ೧೬೮—೪—೦ |
| ಸೆಂಟ್ರಲ ಬ್ಯಾಂಕ್ | ೯೨—೪—೦ |
| ಇಂಪೀರಿಯಲ್ ಬ್ಯಾಂಕ ಪೂರ್ಣ | ೨೦೫೭-೮-೦ |
| ಇಂಡಿಯನ್ ಬ್ಯಾಂಕ | ೨೦೮-೮-೦ |
| ರಿಝರ್ವ ,, | ೧೧೨—೮—೦ |

### ಚಿನ್ನ--ಬೆಳ್ಳಿ

ಚಿನ್ನ ಬೆಳ್ಳಿಗಳ ಬೆಲೆ ತುಸು ಇಳಿಮುಖವಾಗಿದೆ.

| | |
|---|---|
| ತಯಾರಿ ಚಿನ್ನ | ೧೧೪—೨—೦ |
| ವಾಯದಾ ಚಿನ್ನ | ೧೧೩—೧೦—೦ |
| ಸಾವರೀನ | ೭೫—೦—೦ |
| ತಯಾರಿ ಬೆಳ್ಳಿ | ೧೬೯—೧೩—೦ |
| ವಾಯದಾ | ೧೬೯—೧೩—೦ |
| ಚೆಂಬರ | ೧೭೦-೮-೦ |

### ಅರಳೆ

ಇಜಿಪ್ತದ ಅರಳೆ ಬರುವ ಆಸೆ ವಿಶೇಷವಾಗಿ ಉಳಿಯದ್ದರಿಂದ ಬೆಲೆಗಳು ಏರಬೇಕಾಗಿದ್ದರೂ ಪೇಟೆಗೆ ಬರುತ್ತಿರುವ ಅರಳೆ ನಿರೀಕ್ಷೆಗಿಂತ ಹೆಚ್ಚಾದುದರಿಂದ ತೇಜಿಗಳ ಧೈರ್ಯ ಕುಗ್ಗಿದೆ. ಇಂದಿನ ಬೆಲೆಗಳು ಹೀಗಿದ್ದವು:

| | |
|---|---|
| ಜುಲೈ | ೬೫೮-೮-೦ |
| ಸೆಪ್ಟೆಂಬರ | ೬೩೮-೮-೦ |

### ಎಣ್ಣೆ ಕಾಳು

| | |
|---|---|
| ಶೇಂಗಾ | ೧೮೩-೧೨-೦ |
| ,, (ಹೊಸ) | ೧೮೧-೪-೦ |
| ಅಗಸಿ | ೨೮—೧-೦ |
| ,, ಎಣ್ಣೆ | ೧೬—೬—೦ |

### ಸಾಂಗಲಿ

ತಾ. ೭

| | |
|---|---|
| ಅರಸಿನ (ಹೊಸ) ಹೇರು | ೧೨೨ |
| ಶೇಗಾ ಖಂಡಿ | ೧೪೪-೦—೦ |
| ಮೆಣಸಿನಕಾಯಿ ಹೇರು | ೨೦೦ |
| ಬೆಲ್ಲ ಹೇರು | ೫೭ |

### ಹುಬ್ಬಳ್ಳಿ

| | | |
|---|---|---|
| ಜಯವಂತ ಹತ್ತಿ | ೧ | ೪೧೫-೪೨೫ |
| ,, | ೨ | ೪೦೦-೪೧೦ |
| ,, | ೩ | ೩೭೦-೩೯೦ |
| ಅಪಲಂಡ ಹತ್ತಿ | ೧ | ೪೨೦-೪೨೫ |
| ,, | ೨ | ೪೦೫-೪೧೫ |
| ಜಿನ | | ೨೯೫-೩೨೦ |
| ಅ. ಢಬಲರೋಲ | | ೨೯೫-೩೦೫ |
| ಸ. ಜಿನ | | ೨೮೦—೨೯೦ |
| ಜ. ಹತ್ತಿಕಾಳು | | ೮। ಪೌಂ. |
| ಡ. ಹತ್ತೀಕಾಳು | | ೮॥ ,, |

ಮೈಸೂರ ಮಂತ್ರಿಗಳಾದ ಶ್ರೀ ಸುಬ್ಬರಾಮ ಚೆಟ್ಟಿಯವರು ನ್ಯಾಯವಿಧಾಯಕ ಸಭೆಯಲ್ಲಿ ಕೇಳಿದ ಪ್ರಶ್ನೆಗೆ ಉತ್ತರ ಕೊಡುತ್ತ ಬೆಂಗಳೂರ ನಗರ ಸಭೆಯಲ್ಲಿ ೧೯೫೮ ಸಿಮೆಂಟ ಚೀಲಗಳು ಮಾಯವಾಗಿವೆಯೆಂದೂ ಅವುಗಳ ಬೆಲೆ ೭೧೧೦ ರೂಪಾಯಿಯಿದ್ದು ಈ ವರೆಗೆ ೬೨೦೦ ರೂ. ವಸೂಲ ಮಾಡಿದ್ದು ಎಂಜನಿಯರರ ಜಬಾನಿ ಕೇಳಲಾಗಿದೆಂದು ಹೇಳಿದರು.

# ನಾಲ್ಕು ಮಾತು — ರಂಗನಾಥ ದಿವಾಕರ

### ೧ ಪ್ರಾಂತೀಕರಣದ ಚಳವಳಿ

ಭಾಷಾನುಗುಣ ಪ್ರಾಂತರಚನಾ ಸಮಿತಿಯ ನೇಮಕವಾಗಿ ೩ ವಾರಗಳು ಮಾತ್ರ ಆದವು. ಈಗಇದೇ ೧೯-೭-೪೮ನೆ ದಿನ ದಿಲ್ಲಿಯಲ್ಲಿ ಅದರ ಪ್ರಥಮ ಸಭೆ ಕರೆಯಲಾಗಿದೆ. ಅಂದ ಬಳಿಕ ಅದರ ಕೆಲಸವನ್ನು ಅದಷ್ಟು ದ್ರುತಗತಿಯಿಂದ ಮಾಡುವ ವಿಚಾರವಿದ್ದುದು ಸ್ಪಷ್ಟವು. ಹೀಗಿರುವದರಿಂದ ಈಗ ಸಭೆ ಸಮ್ಮೇಲನ, ಭಾವನಾಪೂರ್ಣ ಗೊತ್ತುವಳಿಗಳು, ಆವೇಶಯುಕ್ತ ಭಾಷಣಗಳು ಮುಂತಾದವುಗಳ ಮೂಲಕ ಪ್ರಾಂತೀಕರಣದ ಬಗ್ಗೆ ಚಳವಳಿಯನ್ನು ನಡೆಸುವ ಕಾಲವು ಮೀರಿ ಹೋಗಿದೆ ಎಂಬದನ್ನು ಎಲ್ಲರೂ ಲಕ್ಷಕ್ಕೆ ತಂದುಕೊಳ್ಳಬೇಕು. ಇನ್ನು ಆ ಸಮಿತಿಯ ಎದುರು ವಿಷಯಗಳ ಖಂಡನ ಮಂಡನ, ಅದಕ್ಕೆ ಸೂಚನೆ ಸಲಹೆ ಮುಂತಾದವುಗಳನ್ನು ಮಾಡುವದರಲ್ಲಿ ತೊಡಗುವದೇ ನಮ್ಮ ಉದ್ಯೋಗವಾಗಬೇಕು. ಒಮ್ಮೆ ಈ ಸಮಿತಿಯವರು ಇಂಥಿಂಥ ಪ್ರಾಂತಗಳು ಆಗತಕ್ಕದ್ದು ಎಂದು ನಿರ್ಣಯ ಕೊಟ್ಟರೆಂದರೆ ಬಳಿಕ ಗಡಿಗಳ ನಿರ್ಣಯದ ಪ್ರಶ್ನೆ ಬರುವದು. ಈ ಕ್ರಮದಿಂದ ಶಾಂತವಾಗಿ ಧೀರೋದಾತ್ತ ಭಾವದಿಂದ ಸಾಗಿದರೆ ಯಾವ ತೊಂದರೆಯೂ ಆಗಲಿಕ್ಕಿಲ್ಲವೆಂದು ಧಾರಾಳವಾಗಿ ಹೇಳಬಹುದು. ವಿಶೇಷತಃ ಹೈದರಾಬಾದದ ದೊಡ್ಡದೊಂದು ಪ್ರಶ್ನೆ ನಮ್ಮ ಮಗ್ಗುಲಲ್ಲಿಯೇ ಇದ್ದು ಅದು ಅತ್ಯಂತ ತೊಡಕಿನದಾಗಿದ್ದರಿಂದ ಈ ವೇಳೆಗೆ ಬೇರೆ ಯಾವದೇ ಅನಾವಶ್ಯಕವಾಗಿರುವ ಚಳವಳಿಯನ್ನು ನಡೆಸುವದಾಗಲಿ ಹೂಡುವದಾಗಲಿ ಜೊಣೆಗಾರಿಕೆಯ ಲಕ್ಷಣವಾಗಲಿಕ್ಕಿಲ್ಲ.

ಅಂಧ್ರರು ಭಾಷಾನುಗುಣ ಪ್ರಾಂತರಚನೆಯ ಚಳವಳಿಯಲ್ಲಿ ಎಲ್ಲಕ್ಕೂ ಪೂರ್ವಿಕರು ಎಂಬದು ನಿಜ. ಆದರೆ ಈಗ ಒಂದು ವಿಚಾರಣಾ ಸಮಿತಿ ನೇಮಿಸಲಾದ ಬಳಿಕ ಸಹ ಅಂಥ ಚಳವಳಿಯ ಅವಶ್ಯಕತೆ ಇದೆಯೋ ಎಂಬದನ್ನು ವಿಚಾರಿಸುವದು ಯೋಗ್ಯವಾಗುವದು. ಪ್ರಾಂತೀಕರಣದ ಬಗ್ಗೆ ಮಾಡತಕ್ಕ ಕೆಲಸವೇ ಉಳಿಯಲಿಲ್ಲ ಎಂದು ನಾನು ಅನ್ನುವದಿಲ್ಲ. ಆದರೆ ಆ ಕೆಲಸವು ಮೇಲೆ ಹೇಳಿದಂತೆ ಬೇರೆ ತರದ್ದಿರುವದು. ಈ ಸಂದರ್ಭದಲ್ಲಿ ಮದ್ರಾಸದ ಮುಖ್ಯ ಮಂತ್ರಿಗಳಾದ ಶ್ರೀ. ಓಮಂಡೂರರು ಅಂಧ್ರರಿಗೆ ಕೊಟ್ಟ ಸಲಹೆ ಯಥಾಯೋಗ್ಯವಾಗಿರುವದೆಂದು ನಾನು ಹೇಳದಿರಲಾರೆ. ಯಾವದೇ ಸಾಧ್ಯಕ್ಕಾಗಿ ಸಂಯಮದಿಂದ ಸಮಯೋಚಿತ ಸಾಧನಗಳನ್ನು ಉಪಯೋಗಿಸುವದರಲ್ಲಿಯೇ ಜಾಣತನವಿದೆ. ಯಥಾರ್ಥವಿದೆ.

### ೨ ವಿಧಾಯಕ ಕಾರ್ಯ

ಕರ್ನಾಟಕ ವಿಧಾಯಕ ಕಾರ್ಯಕರ್ತರ ಸಮ್ಮೇಲನದ ಉದ್ದೇಶ ಸಾಧನೆಗಾಗಿ ಆಯಾ ಚಟುವಟಿಕೆಗಳನ್ನು ನಡೆಸುವ ಸಂಘ ಸಮಿತಿಗಳ ಪ್ರತಿನಿಧಿಗಳ ಒಂದು ಮಂಡಳವು ತೀವ್ರವೆ ಕೆಲಸವನ್ನು ಪ್ರಾರಂಭಿಸಬಹುದು. ಆದರೆ ಆ ಉದ್ದೇಶ ಸಾಧನೆಯು ಕೇವಲ ಆ ಮಂಡಳದ ಹೊಣೆಯು, ಅದರ ಹೆಗಲ ಮೇಲೆಯೆ ಎಲ್ಲ ಭಾರವೂ ಇದೆ ಎಂದು ನಾನು ತಿಳಿಯುವದಿಲ್ಲ. ಕರ್ನಾಟಕದಲ್ಲಿ ನಡೆದ ಹಾಗೂ ನಡೆಯುತಿರುವ ವಿಧಾಯಕ ಕಾರ್ಯಗಳ ಆಮೂಲಾಗ್ರ ವರದಿಯೊಂದು ತಯಾರಾಗುವದು ಅವಶ್ಯ. ಇಡೀ ಕರ್ನಾಟಕವು ಒಂದೇ ಒಂದು, ಅದರಲ್ಲಿಯ ಎಲ್ಲ ಚಟುವಟಿಕೆಗಳು ಏಕಸೂತ್ರತೆಯಿಂದ ನಡೆಯಬೇಕೆಂಬುದನ್ನು ಎಲ್ಲ ಕಾರ್ಯಕರ್ತರು ಮನಗಾಣುವದು ಎಲ್ಲಕ್ಕೂ ದೊಡ್ಡ ವಿಧಾಯಕ ಕಾರ್ಯ ಎಂದು ಹೇಳಬಲ್ಲೆ. ಈಗ ನಡೆಯುತಿರುವ ಕಾರ್ಯಗಳಿಗೆ ಪ್ರತಿಯೊಂದು ಬಗೆಯಿಂದ ಪ್ರೋತ್ಸಾಹ ಕೊಡುವದು, ಅಡಚಣೆಗಳೇನಾದರೂ ಇದ್ದರೆ ಅವುಗಳನ್ನು ದೂರೀಕರಿಸುವದು, ಯಾವ ವಿಧಾಯಕ ಕಾರ್ಯಗಳು ಈಗ ನಮ್ಮಲ್ಲಿ ನಡೆಯುವದಿಲ್ಲವೋ ಅವುಗಳನ್ನು ಪ್ರಾರಂಭಿಸಲು ಯತ್ನಿಸುವದು ಇವೆಲ್ಲ ನಾವೆಲ್ಲರೂ ಮಾಡಬಹುದಾದ ಕಾರ್ಯಗಳಿವೆ. ಇದಲ್ಲದೆ ಎಲ್ಲ ವಿಧಾಯಕ ಕಾರ್ಯಗಳೂ ಒಂದೇ ಚಟುವಟಿಕೆಯ ಅಂಗಗಳು ಎಂಬದನ್ನು ಎಲ್ಲ ಕಾರ್ಯಕರ್ತರೂ ಅರಿತು ಅದರಂತೆ ಪರಸ್ಪರ ಸಹಾಯ ಮಾಡುವದು ಅತ್ಯವಶ್ಯವಿರುವದು. ಸ್ವಾತಂತ್ರ್ಯ ಪ್ರಾಪ್ತಿಯ ತರುವಾಯ, ಅಂದರೆ ರಾಜ್ಯಕ್ರಾಂತಿಯ ತರುವಾಯ, ಆರ್ಥಿಕ ಕ್ರಾಂತಿ ಹಾಗೂ ಸಮಾಜ ಕ್ರಾಂತಿ ಆಗಿಯೇ ತೀರಬೇಕಾಗಿದೆ. ಅದನ್ನು ಗಾಂಧೀಜಿಯವರ ಅದ್ವಿತೀಯವಾದ ಶಾಂತಿಮಾರ್ಗದಿಂದ ಮಾಡಬೇಕಾಗಿದೆ. ಅದೇ ಗಾಂಧೀಜಿಯವರ ವಿಧಾಯಕ ಕಾರ್ಯದ ಹಾಗೂ ಸೇವಾಭಾವದ ಗುಟ್ಟು.

× × ×

ಕಾಂಗ್ರೆಸ್ ಕಾರ್ಯಕರ್ತರೆನಿಸಿಕೊಳ್ಳುವವರು ವಾಡಿಕೆಯಾಗಿ ಪ್ರಾಧಾನ್ಯತಃ ರಾಜಕಾರಣದಲ್ಲಿ ಹೆಚ್ಚಾಗಿ ತೊಡಗಿದವರಿರುತ್ತಾರೆ. ಅವರ ಲಕ್ಷವು ವಿಧಾಯಕ ಕಾರ್ಯದತ್ತ ಇರುವದಿಲ್ಲ ಎಂಬುದು ಅನುಭವದ ಮಾತು. ಸ್ವಾತಂತ್ರ್ಯದ ಹೋರಾಟ ನಡೆದಾಗ ಆ ಮಾತು ಸರಿಹೋಗುತಿತ್ತು. ಆದರೆ ಇನ್ನು ಸೇವೆಯ ಮೂಲಕವೆ, ವಿಧಾಯಕ ಚಟುವಟಿಕೆಗಳ ಮೂಲಕ ಜನಶಕ್ತಿಯನ್ನು ನಾವು ಹೆಚ್ಚಿಸುವದು ಸಾಧ್ಯವು. ಕಾಂಗ್ರೆಸಿನವರು ಈ ಕೆಲಸವನ್ನು ಮಾಡದೆ ಹೋದರೆ ಕಮ್ಯುನಿಸ್ಟರಾಗಲಿ, ಸೋಶಾಲಿಸ್ಟರಾಗಲಿ ಆ ಕೆಲಸವನ್ನು ಸಾಧಿಸುವರು. ಹಾಗೆ ಆದ ಪಕ್ಷದಲ್ಲಿ ಕಾಂಗ್ರೆಸ್ಸು ಪದಚ್ಯುತವಾಗಿ ಹೋಗುವದು. ಯಾಕಂದರೆ ಯಾರ ಕಡೆಗೆ ಜನಶಕ್ತಿಯೊ ಅವರ ಕಡೆಗೆ ರಾಜ್ಯಪದವು. ರಾಜ್ಯಪದದ ತಳಹದಿಯು ಜನಪದದ ಸೇವೆಯಲ್ಲಿ, ಜನಜಾಗ್ರತಿಯಲ್ಲಿ, ಜನಶಕ್ತಿಸಂವರ್ಧನದಲ್ಲಿ, ಜನಸಂಘಟನದಲ್ಲಿ. ಇದನ್ನು ತಿಳಿದುಕೊಂಡು ತದನುಗುಣವಾಗಿ ವರ್ತಿಸದೆ ಸಿಕ್ಕ ಅಧಿಕಾರದಿಂದಲೆ ಸಂತುಷ್ಟರಾಗಿ ತಮ್ಮ ತಮ್ಮೊಳಗೆ ಕಾಂಗ್ರೆಸ್ಸಿಗರು ತಿಕ್ಕಾಡುತ್ತ ಕುಳಿತರೆ ಕಾಂಗ್ರೆಸ್ಸಿಗೆ ಉಳಿಗಾಲವಿಲ್ಲ ಎಂಬುದನ್ನು ನಾವೆಲ್ಲರೂ ಅರಿತಿರಬೇಕು. ಆದುದರಿಂದ ಪ್ರತಿಯೊಂದು ರೀತಿಯಲ್ಲಿ ಪ್ರತಿಯೊಂದು ಬಗೆಯ ವಿಧಾಯಕ ಕಾರ್ಯವನ್ನು ಹೆಚ್ಚೆಚ್ಚಾಗಿ ನಡೆಸುವದು ಪ್ರತಿಯೊಬ್ಬ ಕಾಂಗ್ರೆಸ್ಸಿಗನ ಹಾಗೂ ಪ್ರತಿಯೊಬ್ಬ ನಾಗರಿಕನ ಕರ್ತವ್ಯವಾಗಿದೆ.

### ೩ ಸಾಂಗಲಿಯ ಅಧ್ಯಾತ್ಮ ವಿದ್ಯಾಮಂದಿರ

ಸಾಂಗಲಿಯ ಅಧ್ಯಾತ್ಮ ವಿದ್ಯಾಮಂದಿರವು ಸ್ಥಾಪಿತವಾಗಿ ಈಗ ಸುಮಾರು ಎಂಟು ತಿಂಗಳು ಆಯಿತು. ಅದಕ್ಕೆ ಪ್ರಸಿದ್ಧ ವಿದ್ವಾಂಸರೂ ಅಧ್ಯಾತ್ಮದಲ್ಲಿ ಮುಂದರಿದವರೂ ಆದ ಪ್ರೊ. ರಾನಡೆಯವರ ಅಧಿಷ್ಠಾನವಿರುವದು. ಸಾಂಗಲಿಯ ಉದಾರ ರಾಜೇಸಾಹೇಬರ ಆಶ್ರಯವಿರುವದು. ಅತ್ಯಂತ ಶ್ರದ್ಧೆಯಿಂದ ಕೆಲಸ ಮಾಡುವ ಅನೇಕರ ಸಹಾಯವಿರುವದು. ಈ ವಿದ್ಯಾಮಂದಿರದ ಪರವಾಗಿ ಅಧ್ಯಾತ್ಮ ವಿದ್ಯೆಯ ಅಭ್ಯಾಸ ಪ್ರಸಾರಾದಿಗಳು ಮರಾಠಿ, ಕನ್ನಡ, ಇಂಗ್ಲೀಷ, ಹಿಂದೀ ಹೀಗೆ ನಾಲ್ಕು ಭಾಷೆಗಳಲ್ಲಿಯಂತೂ ನಡೆಯತಕ್ಕವಿವೆ. ಸದ್ಯಕ್ಕೆ ಇದರ ಎರಡು ಶಾಖೆಗಳು ಇವೆ, ಒಂದು ಸಾಂಗ್ಲಿಯಲ್ಲಿ ಇನ್ನೊಂದು ಅಲಹಾಬಾದದಲ್ಲಿ, ಧಾರವಾಡ ಹುಬ್ಬಳ್ಳಿಯಂಥ ಕೇಂದ್ರಸ್ಥಾನದಲ್ಲಿಯೂ ಒಂದು ಶಾಖೆ ಇರುವದು ಯೋಗ್ಯವೆನಿಸುವದು. ಅಧ್ಯಾತ್ಮ ವಿದ್ಯಾ ಪಕ್ಷಪಾತಿಗಳು ಈ ವಿಷಯದ ವಿಚಾರ ಮಾಡುವದು ಅವಶ್ಯ. ಹಿಂದಕ್ಕೆ ಥಿಯಾಸಫಿಕಲ್ ಸೊಸಾಯಟಿಗಳು ಈ ಬಗೆಯ ಕಾರ್ಯವನ್ನು ಮಾಡುತಿದ್ದವು. ಆದರೆ ಈಗ ಅವು ನಿರ್ಜೀವಪ್ರಾಯವಾದಂತೆ ತೋರುವದು. ಅದೇ ಕಾರ್ಯವನ್ನು ಅಂದರೆ ಅಧ್ಯಾತ್ಮ ವಿದ್ಯೆಯ ಮಹತ್ವದ ಅರಿವನ್ನು ಮಾಡಿ ಕೊಡುವ ಕಾರ್ಯವನ್ನು ಅಧ್ಯಾತ್ಮ ವಿದ್ಯಾಮಂದಿರದಂಥ ಸಂಸ್ಥೆಗಳೆ ಮಾಡಬಲ್ಲವು.

× × ×

೩—೭—೪೮ ನೆ ದಿನ ಪ್ರೊ. ರಾನಡೆಯವರ ಅಧ್ಯಕ್ಷತೆಯಲ್ಲಿ "ನಿಜ ಧರ್ಮ" ಎಂಬ ವಿಷಯವನ್ನು ಕುರಿತು ಮಾತು ಸಾಂಗಲಿಯಲ್ಲಿ ನನ್ನದಾಯಿತು. ಆಗ ಅಧ್ಯಾತ್ಮಿಕ ಪ್ರಗತಿಗೆ ಎರಡು ಒರೆಗಲ್ಲುಗಳು-ಒಂದು ಅಂತರಿಕ(ಸಬ್ಜೆಕ್ಟಿವ್) ಇನ್ನೊಂದು ಬಾಹ್ಯ (ಅಬ್ಜೆಕ್ಟಿವ್) ಎಂದು ಹೇಳಿದೆನು. ಪ್ರಗತಿಹೊಂದಿದವನ ಶರೀರ, ಮನ, ನೀತಿ ಇವು ಹೇಗೆ ಉತ್ತರೋತ್ತರವಾಗುತ್ತಾ ಹೋಗಬೇಕೆಂಬ ವಿವರಗಳನ್ನು ಸೂಚಿಸಿದೆನು. ಈ ಒರೆಗಲ್ಲಿಗೆ ಹತ್ತದೆ ಹೋದರೆ ಆಯಾ ಸಾಧಕನ ಸಾಧನೆಯಲ್ಲಿ ಏನಾದರೂ ದೋಷವಿದೆ ಎಂದು ಪ್ರತಿಪಾದಿಸಿದೆನು. ಈ ಮಾತನ್ನೆ ಅಧ್ಯಕ್ಷರು ಎತ್ತಿ ಇದೊಂದು ಮೌಲಿಕ ವಿಚಾರವಿರುವದು, ಇದನ್ನು ಹೆಚ್ಚು ವಿಸ್ತಾರದಿಂದ ಹೇಳುವದು, ಕೇಳುವದು, ವಿಚಾರಿಸುವದು ಅವಶ್ಯ ಎಂದರು.

× × ×

ಅಧ್ಯಾತ್ಮ ಹಾಗೂ ಅಧ್ಯಾತ್ಮಿಕ ಸಾಧನೆ ಇವುಗಳ ಹೆಸರಿನಲ್ಲಿ ಕೇವಲ ಧ್ಯಾನುಕವಾದ ಅಥವಾ 'ಸರ್ವಭೂತ ಹಿತೇ ರತಃ' ಇಲ್ಲದ ಮಾರ್ಗಗಳು ಪ್ರಚಾರದಲ್ಲಿ ಬರಬಾರದು. ಈ ಎಚ್ಚರವನ್ನು ನಾವೆಲ್ಲರೂ ವಹಿಯಲಿಕ್ಕೆ ಬೇಕು. ಆ ದೃಷ್ಟಿಯಿಂದ ಅಧ್ಯಾತ್ಮಿಕ ಪ್ರಗತಿಯ ಈ ಬಾಹ್ಯ ಪುರಾವೆಯು ಬಹಳ ಉಪಯುಕ್ತವಾಗುವದೆಂಬಲ್ಲಿ ಸಂಶಯವಿಲ್ಲ. ಅಂತರ್ಯದಲ್ಲಿ ಆದ ಪ್ರಗತಿಯು, ವಿಕಾಸದ ತೇಜವು ಬಾಹ್ಯ ಸಾಧನಗಳಾದ ಶರೀರಾದಿಗಳಲ್ಲಿ ಹೊಳೆದು ಪರಮಾತ್ಮನ ಸಂಕಲ್ಪದಂತೆ ಆಯಾ ಸಾಧಕನ ಮುಖಾಂತರ ಲೋಕ ಸಂಗ್ರಹ ಲೋಕ ಕಲ್ಯಾಣಗಳಾಗುವುದರಲ್ಲಿಯೆ ಅಧ್ಯಾತ್ಮ ವಿದ್ಯೆಯ ಪೂರ್ಣ ಪರಿಣತಿಯಿರುವದು. ಅಂದ ಬಳಿಕ ಯಾವ ಅಧ್ಯಾತ್ಮವಾದಿಯು ಶರೀರತಃ ಜಡ, ನಿಸ್ತೇಜ, ರೋಗಗ್ರಸ್ತನಿರಬಲ್ಲನು? ಯಾವ ಸಾಧಕನು ಜಡಮತಿಯೂ ಸ್ಮೃತಿಹೀನನೂ ದಡ್ಡನೂ ಇರಲು ಸಾಧ್ಯವು? ಯಾವ ಆಧ್ಯಾತ್ಮಮಾರ್ಗಿಯು ಅನೀತಿಕರ ವರ್ತನವನ್ನು ಮಾಡುತಿರುವದು ಸಾಧ್ಯವು? ಅಧ್ಯಾತ್ಮವೆಂದರೆ ತೇಜವು, ಜ್ಞಾನವು. ಆದರೆದುರು ಯಾವ ಬಗೆಯ ಜಡತೆ, ರೋಗ, ಮೂಢತನ, ಕತ್ತಲೆ, ತಮಸ್ಸು, ಪಾಪ, ಅನೀತಿ ಇತ್ಯಾದಿ ನಿಲ್ಲಲರಿಯವು.

## ಸಂಸ್ಕೃತ ಪತ್ರಿಕೆಗಳು

ಹಿಂದುಸ್ಥಾನದಲ್ಲಿ ಪ್ರಕಟವಾಗುತ್ತಿರಬಹುದಾದ ಸಂಸ್ಕೃತ ಪತ್ರಿಕೆಗಳಿದ್ದರೆ ಅವು ಯಾವು ಮತ್ತು ಎಲ್ಲಿ ಹೊರಡುತ್ತಿವೆ ಎಂಬುದನ್ನು ಓದುಗರು ನನಗೆ ತಿಳಿಸಿದರೆ ನಾನು ಅತ್ಯಂತ ಋಣಿಯಾಗಿರುತ್ತೇನೆ. ಕೆಲವು ವರ್ಷಗಳ ಹಿಂದೆ ಬನಾರಸದಿಂದ ಹೊರಡುವ "ಸಂಸ್ಕೃತಮ್" ಎಂಬ ವಾರ ಪತ್ರಿಕೆಯನ್ನು ನಾನು ಕಂಡಿದ್ದೆ. ಈಗ ಅವು ದೊರಕುತ್ತಿದ್ದರೆ ಆ ಪತ್ರಿಕೆಯ ಕೆಲ ಮಾದರಿಯ ಸಂಚಿಕೆಗಳನ್ನು ನೋಡಬಯಸುತ್ತೇನೆ.

ವರ್ಧಾ

೨೪—೬—೪೮ ಕಿಶೋರಲಾಲ ಮಶ್ರೂವಾಲಾ

## ಕೊಚ್ಚಿ ಮಹಾರಾಜರ ನಿಧನ

ಕೊಚ್ಚಿ ಸಂಸ್ಥಾನದ ಮಹಾರಾಜರಾದ ಶ್ರೀ ಕೇರಳವರ್ಮ ಇವರು ಕೃಷ್ಣವಿಲಾಸ ಅರಮನೆಯಲ್ಲಿ ೮ ನೇ ತಾರೀಖು ಮಧ್ಯಾಹ್ನ ೧೨—೩೦ ಗಂಟೆಗೆ ಸ್ವರ್ಗಸ್ಥರಾದರು. ಅವರಿಗೆ ೭೯ ವರ್ಷಗಳಾಗಿದ್ದವು. ಸ್ವತಂತ್ರ ಕೇರಳ ಪ್ರಾಂತ ರಚನೆಯಲ್ಲಿ ಇವರು ಬಹಳ ಆಸ್ಥೆ ತಾಳಿದ್ದರು.

ಅಗ್ಗ ದರದ ಅಂಗಡಿಯಲ್ಲಿ ಕಾಳು ಪಡೆಯುವದು ೧೫೦ ರೂ ದ ಒಳಗೆ ಮಾಸಿಕ ಉತ್ಪನ್ನವಿದ್ದವರಿಗೆ ಮಾತ್ರ ಸಾಧ್ಯವಿತ್ತು. ಈಗ ಸರಕಾರದವರು ೨೫೦ ರೂ. ವರೆಗೆ ಮಾಸಿಕ ಉತ್ಪನ್ನವಿದ್ದರೂ ಅಗ್ಗದರದ ಅಂಗಡಿಗಳ ಪ್ರಯೋಜನ ಪಡೆಯಬಹುದೆಂದು ತಾ. ೫ ಕ್ಕೆ ಒಂದು ಪ್ರಕಟನೆ ಹೊರಡಿಸಿದ್ದಾರೆ.

# ಕರ್ಮವೀರ

[illegible] ವಿಕ್ರಮ ವರ್ಷ [illegible]
ಆಷಾಢ ಶು|| ೬ ಸೋಮವಾರ

## ಸಕಾಲಿಕ ಎಚ್ಚರಿಕೆ

ಮಧ್ಯಪ್ರಾಂತದ ಮುಖ್ಯಮಂತ್ರಿಗಳಾದ ಪಂಡಿತ ಶುಕ್ಲರು ಮತ್ತು ಸ್ಥಾನಿಕ ಸಂಸ್ಥೆಗಳ ಮಂತ್ರಿಗಳಾದ ಶ್ರೀ ದ್ವಾರಕಾಪ್ರಸಾದ ಮಿಶ್ರರು ಕಾಂಗ್ರೆಸ್ಸಿಗರಿಗೆ ಎಚ್ಚರಿಕೆಯ ಹಿತೋಕ್ತಿಗಳನ್ನು ಹೇಳಿರುವರು. ಅಧಿಕಾರಾರೂಢವಾದ ಕಾಂಗ್ರೆಸ ಪಕ್ಷದ ಪ್ರಮುಖ ಸದಸ್ಯರು ಅಧಿಕಾರಿಗಳ ದೈನಂದಿನ ಆಡಳಿತದಲ್ಲಿ ಕೈಹಾಕಿ ಅದಕ್ಕೆ ವ್ಯತ್ಯಯವನ್ನುಂಟು ಮಾಡುತ್ತಿರುವರೆಂಬ ನಮ್ಮ ಭಾಗದಲ್ಲಿ ಎದ್ದ ಕೂಗು ಆ ಪ್ರಾಂತದಲ್ಲಿಯೂ ಕೇಳಬಂದಿದ್ದರಿಂದ ಮಂತ್ರಿವರ್ಯರು ಆ ಬಗ್ಗೆ ಕಾಂಗ್ರೆಸ್ಸಿಗರನ್ನು ಎಚ್ಚರಿಸಿರುವರು. 'ಆಡಳಿತವು ಕಾರ್ಯಕ್ಷಮವಾಗಿ ಸಾಗುವದಕ್ಕೆ ಕಾಂಗ್ರೆಸ್ಸಿಗರಿಂದ ವ್ಯತ್ಯಯ ಬರುತಲಿದೆ, ಮತ್ತು ಅನೇಕ ಸಲ ಜಿಲ್ಹಾಧಿಕಾರಿಗಳು ಕಾಂಗ್ರೆಸ್ಸಿಗರ ಒತ್ತಾಯಕ್ಕೆ ಬಲಿಬೀಳುತ್ತಾರೆ.' ಎಂದು ಮಾನ್ಯ ಮಿಶ್ರ ಇವರು ಅಧಿಕಾರಿಗಳನ್ನುದ್ದೇಶಿಸಿ ಭಾಷಣ ಮಾಡುವಾಗ ನುಡಿದರು. ಕಾಂಗ್ರೆಸ್ಸು ಅಧಿಕಾರದಲ್ಲಿರುವದರಿಂದ, ಅಧಿಕಾರಿಗಳು ತಮ್ಮ ನವಕರಿಯ ಭದ್ರತೆಗಾಗಿ ಅವರ ವರ್ಚಸ್ಸಿಗೆ ಒಳಗಾಗಿ ಕರ್ತವ್ಯಚ್ಯುತರಾಗಿಯೂ ಅವರ ಮನಸ್ಸಿನಂತೆ ಕೆಲಸ ಮಾಡುವದು ಸ್ವಾಭಾವಿಕವಾಗಿದೆ. ಇದಕ್ಕೆ ಅಧಿಕಾರಿಗಳು ಅಷ್ಟೊಂದು ದೋಷಕ್ಕೆ ಪಾತ್ರರಲ್ಲೆಂದು ಹೇಳಬೇಕಾಗುವದು. ಜನಸಾಮಾನ್ಯರೊಡನೆ 'ಅಧಿಕಾರಿಗಳು ಹೆಚ್ಚು ಸಂಬಂಧ ಬೆಳೆಸಿಕೊಂಡಿದ್ದರಿಂದ ಮತ್ತು ಸಾರ್ವಜನಿಕ ಧುರೀಣರು ಅವರ ಮೇಲೆ ಬಹಳ ವರ್ಚಸ್ಸನ್ನು ಕೂಡಿಸಲು ಪ್ರಯತ್ನಿಸುವದರಿಂದ ಅವರಲ್ಲಿ ಮುಂದೊರೆದು ಕೆಲಸ ಮಾಡುವ ಬುದ್ಧಿ ಹಾಗೂ ಕಾರ್ಯಕ್ಷಮತೆ ಇಲ್ಲದಂತಾಗಿವೆ' ಎಂದು ಮುಖ್ಯಮಂತ್ರಿ ಶುಕ್ಲರು ಅಭಿಪ್ರಾಯ ಪಟ್ಟಿರುವರು.

ಯಾವದೇ ದೇಶದಲ್ಲಿ ಆಡಳಿತವು ಸರಾಗವಾಗಿ ಮತ್ತು ಕಾರ್ಯಕ್ಷಮವಾಗಿ ಸಾಗಬೇಕಾದರೆ ಅಧಿಕಾರಿಗಳು ಪಕ್ಷ ಸಂಗಡಗಳ ಪೀಕಲಾಟದಲ್ಲಿ ಬೀಳದಿರುವದು ಅತ್ಯವಶ್ಯ. ಅಧಿಕಾರಾರೂಢ ಪಕ್ಷವು ಹಾಕಿಕೊಟ್ಟ ನಿಯಮ ನಿಬಂಧನೆ, ಕಾ[illegible]ಕೆ ಕಾನೂನುಗಳನ್ನು ಅಕ್ಷರಶಃ ಕಾರ್ಯರೂಪದಲ್ಲಿ ತಂದು ಪ್ರಜೆಗಳಿಗೆಲ್ಲ ಸುಖಸಮೃದ್ಧಿಯ ಮಾರ್ಗಗಳನ್ನು ಕಲ್ಪಿಸಿಕೊಟ್ಟು, ಶಾಂತಿ ಸುವ್ಯವಸ್ಥೆಯನ್ನಿಡುವದು ಅಧಿಕಾರಿಗಳ ಕರ್ತವ್ಯವಾಗಿದೆ. ಕಾಯದೆ ಕಾನೂನುಗಳನ್ನು ಕಟ್ಟಿಯಿಟ್ಟು ಅಧಿಕಾರಾರೂಢ ಪಕ್ಷ ಪ್ರಮುಖರನ್ನು ಸಂತೋಷ ಪಡಿಸಲಿಕ್ಕೆ ಇಲ್ಲವೆ ಅವರಿಂದ ತಮ್ಮ ಸ್ವಾರ್ಥ ಸಾಧಿಸಲಿಕ್ಕೆ ಯಾವದೇ ಅಧಿಕಾರಿಯು ಅವರ ವರ್ಚಸ್ಸಿಗೊಳಗಾದರೆ ಕರ್ತವ್ಯದಲ್ಲಿ ತಪ್ಪಿದಂತಾಗುತ್ತದೆಂಬುದು ನಿರ್ವಿವಾದ. ಸರಕಾರೀ ಅಧಿಕಾರಿಗಳು ಯಾವಾಗಲೂ ಪಕ್ಷಾತೀತರಿರಬೇಕು. ಅಮೇರಿಕೆಯೊಂದನ್ನು ಬಿಟ್ಟರೆ ಉಳಿದ ದೇಶಗಳಲ್ಲೆಲ್ಲ ಆಡಳಿತಾಧಿಕಾರಿಗಳು ಯಾವದೇ ಪಕ್ಷದ ವರ್ಚಸ್ಸಿಗೊಳಗಾಗದೆ ಅಧಿಕಾರಾರೂಢ ಪಕ್ಷವು ಹಾಕಿಕೊಟ್ಟ ಮಾರ್ಗದಂತೆ ಆಡಳಿತವನ್ನು ಸಾಗಿಸುವದುಂಟು. ಹೊಸದಾಗಿ ಪ್ರಜಾಪ್ರಭುತ್ವವನ್ನು ಪಡೆದ ಹಿಂದುಸ್ತಾನದಲ್ಲಿಯೂ ಇದೇ ಬಗೆಯ ಸೂಕ್ತ ಮಾರ್ಗವನ್ನು ಅನುಸರಿಸುವದು ಅತ್ಯವಶ್ಯವಾಗಿದೆ.

ಹೀಗೆ ಹೇಳಿದ ಮಾತ್ರಕ್ಕೆ ಅಧಿಕಾರಿಗಳು ಕಾಂಗ್ರೆಸ್ ಪ್ರಮುಖರನ್ನು ಉಪೇಕ್ಷಿಸಿ ನಡೆಯಬೇಕೆಂದು ಹೇಳಿದಂತಾಗಲಿಲ್ಲ. ಜನಸಾಮಾನ್ಯರ ಹಿತದ ದೃಷ್ಟಿಯಿಂದ ಕಾಂಗ್ರೆಸ್ಸಿಗರು ಮಾಡಬಹುದಾದ ಸಲಹೆ, ಸೂಚನೆಗಳನ್ನು ಅಧಿಕಾರಿಗಳು ಕೇಳಿಕೊಳ್ಳಬೇಕು. ಸೂಕ್ತವಾದುದನ್ನು, ಸರಕಾರದವರು ಹಾಕಿಕೊಟ್ಟ ಮಾರ್ಗಕ್ಕೆ ವಿರೋಧಕವಾಗದಂತೆ ಕಾರ್ಯರೂಪದಲ್ಲಿ ತರಲು ಪ್ರಯತ್ನಿಸಬೇಕು. ಕಾಂಗ್ರೆಸ್ಸಿಗರಾದರೂ ವೈಯಕ್ತಿಕ ಇಲ್ಲವೆ ತಮ್ಮದೊಂದು ವಿಶಿಷ್ಟ ಗುಂಪಿನ ಹಿತವನ್ನೆ ಲಕ್ಷಿಸಿ ಅಧಿಕಾರಿಗಳ ಮೇಲೆ ಅನವಶ್ಯಕ ವರ್ಚಸ್ಸನ್ನು ಹಾಕುವ ಪ್ರಯತ್ನ ಮಾಡದಿರುವದು ಇಷ್ಟವಾಗಿದೆ. ಅಧಿಕಾರಿ ವರ್ಗವು ಕಾರ್ಯಕ್ಷಮವಾಗಬೇಕಾದರೆ, ದೇಶದಲ್ಲಿ ಶಾಂತಿ ಸುಖಸಮೃದ್ಧಿಯನ್ನು ಅದು ಸಾಧಿಸಬೇಕಾದರೆ ಕಾಂಗ್ರೆಸ್ಸಿಗರು ಅದರ ಆಡಳಿತದಲ್ಲಿ ಕೈಹಾಕದಿರುವದು ಅವಶ್ಯಕ. ಪ್ರತಿಯೊಬ್ಬನು ತನಗೆ ತೋಚಿದ ರೀತಿಯಲ್ಲಿ ಆಡಳಿತ ಸಾಗಬೇಕೆಂದು ಬಯಸಿದರೆ ಎಲ್ಲೆಲ್ಲಿಯೂ ಅರಾಜಕತೆಯೇ ಆಗಬಹುದು ಮತ್ತು ಅಧಿಕಾರಾರೂಢವಾದ ಕಾಂಗ್ರೆಸ ಪಕ್ಷದ ಧವಲ ಕೀರ್ತಿಗೆ ಕಲಂಕ ಬರುವದು.

ಮಂತ್ರಿವರ್ಯ ಮಿಶ್ರರು ಮತ್ತು ಶುಕ್ಲರು ತಮ್ಮ ಪ್ರಾಂತದ ಅಧಿಕಾರಿಗಳನ್ನು ಮತ್ತು ಕಾಂಗ್ರೆಸ್ಸಿಗರನ್ನುದ್ದೇಶಿಸಿ ಹೀಗೆ ಹೇಳಿದ್ದರೂ ಇಡೀ ಹಿಂದುಸ್ತಾನದಲ್ಲಿಯ ಕಾಂಗ್ರೆಸ್ಸಿಗರು ಮತ್ತು ಅಧಿಕಾರಿಗಳು ಇದರಿಂದ ಚೆನ್ನಾಗಿ ಬೋಧ ತೆಗೆದುಕೊಳ್ಳುವಂತಿದೆ. ಪ್ರಮುಖ ಕಾಂಗ್ರೆಸ್ಸಿಗರು ತಮ್ಮ ಪ್ರತ್ಯಕ್ಷಾಪ್ರತ್ಯಕ್ಷ ವರ್ಚಸ್ಸಿನ ದುರುಪಯೋಗ ಮಾಡಿಕೊಳ್ಳದಂತೆ ಅಧಿಕಾರಿಗಳು ಜಾಗ್ರತರಾಗುವದು ಅತ್ಯಂತ ಇಷ್ಟ ಮತ್ತು ಅಗತ್ಯವಾಗಿದೆ.

## ಬ್ರಿಗೇಡಿಯರ್ ಉಸ್ಮಾನರ ವೀರಸ್ವರ್ಗ

ಕಾಶ್ಮೀರದಲ್ಲಿ ಹಿಂದೀ ಸೈನಿಕರ ಕಮಾಂಡರರಾದ ಬ್ರಿಗೇಡಿಯರ್ ಉಸ್ಮಾನರು ತಾ. ೪ ಕ್ಕೆ ಕಾಳಗದಲ್ಲಿ ಮಡಿದ ಸುದ್ದಿಯಿಂದ ಹಿಂದುಸ್ತಾನಕ್ಕೆ ಆಘಾತವಾಗಿದೆ. ಅನೇಕ ಕಾಳಗಗಳಲ್ಲಿ ಹಿಂದೀ ಸೈನ್ಯವನ್ನು ವಿಜಯದಿಂದ ವಿಜಯಕ್ಕೆ ಒಯ್ದ ಬ್ರಿಗೇಡಿಯರ್ ಉಸ್ಮಾನರು ಮಂಡಲಗಳ ಕಾರ್ಯವನ್ನು ಪರಿಶೀಲಿಸಿ ಸೈನಿಕರನ್ನು ಹುರಿದುಂಬಿಸಲು ರಣರಂಗದ ಮುಂಭಾಗಕ್ಕೆ ಹೋದಾಗ ಶತ್ರುವಿನ ೨೫-ಪೌಂಡಿನ ಗುಂಡೊಂದು ಬಡಿದು ಮರಣ ಹೊಂದಿದರು. ಅವರ ಕಳೇಬರವನ್ನು ಕಾಶ್ಮೀರದಿಂದ ಹೊಸದಿಲ್ಲಿಗೆ ತಂದು ಓಖ್ಲಾದ ರುದ್ರಭೂಮಿಯಲ್ಲಿ ರಾಜೋಚಿತ ಸಮಾರಂಭದಿಂದ ಗೋರಿ ಮಾಡಲಾಯಿತು. ಭಾರತೀಯ ನೆಲ ಜಲ-ಆಕಾಶ ಪಡೆಗಳ ಪ್ರಮುಖರೂ ಗವರ್ನರ ಜನರಲ್ ರಾಜಾಜಿ, ಮುಖ್ಯ ಮಂತ್ರಿ ಜವಾಹರಲಾಲ, ಕಾಶ್ಮೀರ ಕೇಸರಿ ಶೇಖಅಬ್ದುಲ್ಲಾ, ಸಂರಕ್ಷಣಮಂತ್ರಿ ಬಲದೇವಸಿಂಗ ಮೊದಲಾದವರೂ ಉಸ್ಮಾನರ ಅಣ್ಣ ಮಹಮ್ಮದ ಸುಬಾನರೂ ಗೌರವಾರ್ಪಣೆ ಮಾಡಿದರು. ಟ್ಯಾಂಕುಗಳು ತೋಫು ಹಾರಿಸಿ ಗೌರವಾರ್ಪಣೆ ಮಾಡಿದವು.

೩೬ ವಯಸ್ಸಿನ ಬ್ರಿ. ಉಸ್ಮಾನರು ಯುಕ್ತ ಪ್ರಾಂತದವರು. ವಿಭಜನೆಯ ಕಾಲಕ್ಕೆ ಭಾರತೀಯ ಸೈನ್ಯದಲ್ಲಿ ಉಳಿಯಲು ನಿರ್ಧರಿಸಿದ ಕೆಲವೇ ಮುಸ್ಲಿಮ ಅಧಿಕಾರಿಗಳಲ್ಲಿ ಅವರೊಬ್ಬರು.

ಮುಖ್ಯ ಮಂತ್ರಿ ಜವಾಹರಲಾಲರು ಉಸ್ಮಾನರ ಅಣ್ಣಂದಿರಿಗೆ ಕಳಿಸಿದ ಗೌರವ ಸಂದೇಶದಲ್ಲಿ ತಮ್ಮ ಪ್ರಾಂತದವರಾದ ಅವರ ನಿಧನದಿಂದ ತಮಗಾದ ವಿಶೇಷ ದುಃಖವನ್ನು ವ್ಯಕ್ತಗೊಳಿಸಿ, ಕಾಶ್ಮೀರದ ಸಲುವಾಗಿ ಹೋರಾಡಿ ಮಡಿದ ಅವರು ಕಾಶ್ಮೀರಿಗಳ ಹೃದಯದಲ್ಲಿ ಅಮರರಾಗಿ ಉಳಿಯುವರೆಂದಿದ್ದಾರೆ.

# ವಾರದ ಸಿಂಹಾವಲೋಕನ

### ಕಾರವಾರದ ಅರಣ್ಯ ಸಂಪತ್ತು

ಉತ್ತರ ಕನ್ನಡ ಜಿಲ್ಹೆಯಲ್ಲಿನ ವಿಪುಲವಾದ ಅರಣ್ಯ ಸಂಪತ್ತಿನ ಪ್ರಯೋಜನ ಪಡೆದರೆ ಕರ್ನಾಟಕದಲ್ಲಿ ವಿವಿಧ ಉದ್ಯೋಗಗಳು ಹೊರಟು ಪ್ರಾಂತದ ಸಂಪದಭಿವೃದ್ಧಿಯಾಗುವಲ್ಲಿ ಸಂದೇಹವಿಲ್ಲ. ಪರಕೀಯ ಸರಕಾರ ಈ ವರೆಗೆ ಇಲ್ಲಿ ಇದ್ದುದರಿಂದ ಕಾರವಾರದ ಅರಣ್ಯ ಸಂಪತ್ತನ್ನು ಅಲಕ್ಷಿಸಲಾಗಿತ್ತು. ಆದರೀಗ ಸ್ವತಂತ್ರ ಸರಕಾರ ಸ್ಥಾಪನೆಯಾಗಿದ್ದರಿಂದ ಮತ್ತು ಕನ್ನಡಿಗರು ಕಾರವಾರ ಅರಣ್ಯ ಸಂಪತ್ತಿನ ಉಪಯೋಗ ಮಾಡಿರೆಂದು ಬಲವಾಗಿ ಕೂಗಿಕೊಳ್ಳಹತ್ತಿದ್ದರಿಂದ ಸರಕಾರದವರು ಅದರ ಪ್ರಯೋಜನ ಪಡೆಯಲಣಿಯಾಗಿದ್ದಾರೆ. ಅಲ್ಲಿ ಸಿಕ್ಕುವ ವಿಪುಲ ಬಿದಿರಿನಿಂದ ಕಾಗದ ಕಾರಖಾನೆಗಳನ್ನು ತೆರೆಯಲಿಚ್ಛಿಸುವವರಿಗೆ ಮುಂಬಯಿ ಸರಕಾರವು ಅಪ್ಪಣೆ ಕೊಡಲು ಸಿದ್ಧವಿದೆಂಬುದಾಗಿ ಪ್ರಕಟನೆ ಹೊರಟಿದೆ. ಪರದೇಶದಿಂದ ಬರುವ ಕಾಗದವನ್ನೇ ಅವಲಂಬಿಸುತ್ತಿರುವ ಕನ್ನಡಿಗರಿಗೆ ಈ ಹೊಸ ಕಾರಖಾನೆ ಹೊರಡುವದರಿಂದ ಬಗೆ ಬಗೆಯಿಂದ ಲಾಭವಿದೆಂಬದನ್ನು ಯಾರೂ ಮರೆಯಕೂಡದು. ಉತ್ತರಸುಪಾ ಭಾಗವನ್ನು ಬಿಟ್ಟು ಉಳಿದ ಭಾಗದಲ್ಲಿಯೆ ಸುಮಾರು ೨೫೨ ಸಾವಿರ ಟನ್ ಬಿದಿರು ಬೆಳೆಯುತಿದ್ದು ಆದರಿಂದ ೧೬೭ ಸಾವಿರ ಟನ್ ಕಾಗದ ಸಿದ್ಧವಾಗಬಹುದೆಂದು ಅಂದಾಜಿದೆ. ಗುಂಡಬಾಳ, ದಾಂಡೇಲಿ ಬೊಮ್ಮನಹಳ್ಳಿ ಮೊದಲಾದ ಭಾಗಗಳಲ್ಲಿ ನೀರಿನ ಅನುಕೂಲತೆ ವಿಪುಲವಾಗಿರುವುದರಿಂದ ಕಾರಖಾನೆಗಳನ್ನು ಸಹಜವಾಗಿ ಹೊರಡಿಸಬಹುದಾಗಿದೆ. ಯುದ್ಧಪೂರ್ವದಲ್ಲಿ ಈ ಈ ಭಾಗದ ಪರಿಶೀಲನೆಯ ಯೋಜನೆಯೊಂದನ್ನು ಸರಕಾರದವರು ಮಾಡಿದ್ದರು. ಆದರೆ ಮುಂದೆ ಯುದ್ಧ ಸುರುವಾದ್ದರಿಂದ ಆ ಯೋಜನೆಗಳು ಅಲ್ಲಿಯೆ ಉಳಿದವು. ೧೯೪೫ರಲ್ಲಿ ಪರಿಶೀಲನೆ ನಡೆದು ಕಾಗದ ಕಾರಖಾನೆ ಹೊರಡಿಸಲು ಬೇಕಾದಷ್ಟು ಸಾಧನ ಸಂಪತ್ತಿದೆಂದು ಸಿದ್ಧವಾಯಿತು. ಅಂತೆಯೆ ಸರಕಾರದವರು ಇದೀಗ ಇಂಥ ಕಾರಖಾನೆಗಳಿಗೆ ಎಲ್ಲ ಬಗೆಯ ಪ್ರೋತ್ಸಾಹ ಕೊಡಲು ಮುಂದೆ ಬಂದುದು ಈ ಸಮಯದಲ್ಲಿ ನಮ್ಮ ಕರ್ನಾಟಕದ ಧನಿಕರು ಹಿಂದೆ ಬಿದ್ದರೆ ಪರಪ್ರಾಂತೀಯರು ಲಾಭದಾಯಕವಾದ ಈ ಧಂದೆಯಲ್ಲಿ ಹಣವನ್ನು ಹಾಕಲು ಮುಂದೆ ಬರಬಹುದು. ಕರ್ನಾಟಕದಲ್ಲಿ ಧನಿಕರಿದ್ದಾರೆ. ಅವರು ಇಂಥ ಉದ್ಯೋಗ ಧಂದೆಗಳಲ್ಲಿ ತಮ್ಮ ಹಣವನ್ನು ತೊಡಗಿಸಲು ಮುಂದೆ ಬರುವದು ಕರ್ತವ್ಯವಾಗಿದೆ. ಇಂಥ ಕಾರಖಾನೆ ತೆರೆಯುವವರು ೩ ತಿಂಗಳಲ್ಲಿ ಪುಣೆಯಲ್ಲಿಯ ಅರಣ್ಯ ಖಾತೆಯ ಮುಖ್ಯಾಧಿಕಾರಿಗಳ ಕಡೆಗೆ ಬರೆದುಕೊಳ್ಳಬೇಕು.

### ಪುಣೆಯಲ್ಲಿ ಕನ್ನಡ ಶಾಲೆ

ಪುಣೆಯಲ್ಲಿ ೧೯೪೧ ರಲ್ಲಿ ೫೬ ಸಾವಿರ ಕನ್ನಡಿಗರಿದ್ದರು. ಈಗ ಒಂದು ಲಕ್ಷದಷ್ಟಿದ್ದಾರೆ. ೧೯೪೧ ರಲ್ಲಿ ರಾಸ್ತಾಪೇಟೆಯಲ್ಲಿ ಕನ್ನಡ ವರ್ಗ ಒಂದು ಪ್ರಾರಂಭವಾಯ್ತು. ಆಗ ೬ ಹುಡುಗರಿದ್ದರು. ಕ್ರಮೇಣ ಬೆಳೆಯುತ್ತ ಈಗ ೧೦೫ ಹುಡುಗರಿದ್ದಾರೆ. ಕನ್ನಡ ಜನವಸತಿಯಿದ್ದ ಬೇರೆ ಬೇರೆ ಪೇಟೆಗಳಲ್ಲಿ ಮತ್ತೆ ಸಾಲೆಗಳಿಗೆ ಸ್ಕೂಲಬೋರ್ಡ ಮಂಜೂರಿ ಕೊಟ್ಟಿತು. ೧ ಲಕ್ಷ ಕನ್ನಡ ಜನಸಂಖ್ಯೆಗೆ ಕೇವಲ ೩ ಸಾಲೆಗಳು ಸಾಲವು. ಕೆಲವು ಹುಡುಗರಂತೂ ೧-೨ ಮೈಲು ದೂರದಿಂದ ಸಾಲೆಗೆ ಹೋಗಬೇಕಾಗುತ್ತದೆ. ಸಾಲೆಯಲ್ಲಿ ೪ ವರ್ಗ ಮಾತ್ರ ಕಲಿಸಲಾಗುತ್ತಿದ್ದು ಇಂಗ್ಲೀಷ ಸಾಲೆಗೆ ಹೋದ ಮೇಲೆ ಕನ್ನಡದ ಸಂಪರ್ಕ ತಪ್ಪಿ ಹೋಗುವದು. ಇದರಿಂದ ಹುಡುಗರಿಗೆ ಬಹಳ ತೊಂದರೆಯಾಗುವದು. ಅದ್ದರಿಂದ ಪುಣೆಯ ೧ ಲಕ್ಷ ಕನ್ನಡಿಗರಿಗಾಗಿ ಒಂದಾದರೂ ಪೂರ್ಣ ಪ್ರಾಥಮಿಕಶಾಲೆಮತ್ತು ಅಲ್ಲಲ್ಲಿವಿದ್ಯಾರ್ಥಿಗಳ ಅನುಕೂಲತೆಗಾಗಿ ಪ್ರಾಥಮಿಕ ಶಾಲೆಗಳು ಹಾಗೂ ಬೇರೆ ಬೇರೆ ಓಣಿಗಳಿಂದ ಬರಲು ಬಾಲ ಬಾಲಕಿಯರಿಗಾಗಿ ಮೋಟಾರ ವ್ಯವಸ್ಥೆ ಆಗಬೇಕು. ಚಿಕ್ಕ ಮಕ್ಕಳಿಗಾಗಿ ಬಾಲಮಂದಿರಗಳಾಗುವ ಅವಶ್ಯಕತೆಯೂ ಉಂಟು. ಇತ್ತ ಕನ್ನಡಿಗರೂ ಪುಣೆಯ ಮುನಸಿಪಲ್ ಶಾಲಾಧಿಕಾರಿಗಳೂ ಲಕ್ಷ್ಯ ಪೂರೈಸಬೇಕು.

### ಪ್ರಾದೇಶಿಕ ಭಾಷೆಯಲ್ಲಿ ಶಿಕ್ಷಣ

ಪ್ರಾದೇಶಿಕ ಭಾಷೆಯನ್ನು ಶಿಕ್ಷಣದ ಮಾಧ್ಯಮವನ್ನಾಗಿ ಮಾಡಬೇಕೆಂದು ಶಿಕ್ಷಣ ಪ್ರೇಮಿಗಳನೇಕರು ಎಂದಿನಿಂದಲೂ ಕೂಗುತ್ತ ಬಂದುದುಂಟು ಆದರೆ ಈ ವರೆಗೆ ಅತ್ತ ಸರಕಾರದವರು ವಿಶೇಷ ಲಕ್ಷ ಕೊಟ್ಟಿರಲಿಲ್ಲ. ಆದರೀಗ ಮುಂಬಯಿ ಸರಕಾರದವರು ಈ ಬೇಡಿಕೆಯತ್ತ ಗಮನಿಸಿ ಸರ್ವಸಾಮಾನ್ಯವಾಗಿ ಪ್ರಾದೇಶಿಕ ಭಾಷೆಯನ್ನೇ ಶಿಕ್ಷಣ ಮಾಧ್ಯಮವನ್ನಾಗಿ ಇಡಲಾಗುವದೆಂದು ಸಾರಿದ್ದು ಸ್ತುತ್ಯವಾಗಿದೆ. ಯಾವುದೊಂದು ಪ್ರದೇಶದಲ್ಲಿ ಬೇರೆ ಭಾಷೆಯ ಜನರಿದ್ದರೆ ಅವರು ತಮ್ಮ ಮಾತೃಭಾಷೆಯ ಶಾಲೆಗಳನ್ನು ಸ್ಥಾಪಿಸಿಕೊಳ್ಳಬಹುದು. ಆದರೆ ಅಲ್ಲಿಯ ಆ ಪ್ರಾದೇಶಿಕ ಭಾಷೆಯನ್ನು ಒತ್ತಾಯದಿಂದ ಕಲಿಸುವ ಒಂದು ಭಾಷೆಯಾಗಿರಬೇಕೆಂದು ಸರಕಾರದವರು ನಿರ್ಧರಿಸಿರುವರು. ಇದರಿಂದ ಭಾಷೆಯ ಬಡೆದಾಟಗಳು ತಪ್ಪಲು ಅವಕಾಶವಾಗುವದು. ಯಾರ ಮೇಲೆಯೂ ಒತ್ತಾಯಮಾಡಿದಂತೆಯೂ ಆಗುವದಿಲ್ಲ. ಕರ್ನಾಟಕದಲ್ಲಿದ್ದ ಮರಾಠರು ತೆಲುಗರು ತಮಿಳರು ತಮ್ಮ ಮಾತೃಭಾಷೆಯ ಶಿಕ್ಷಣದ ಸೌಕರ್ಯವನ್ನು ಅವಶ್ಯವಾಗಿ ಮಾಡಿಕೊಳ್ಳಬಹುದು. ಆದರೆ ಅದೇ ಕಾಲಕ್ಕೆ ಅವರು ಕನ್ನಡವನ್ನು ಅಲಕ್ಷಿಸಿದರೆ ನಡೆಯಲಾರದು. ಅದೇ ರೀತಿ ಮುಂಬಯಿ ಪುಣೆಗಳಲ್ಲಿಯ ಕನ್ನಡಿಗರು ತಮ್ಮ ಮಕ್ಕಳ ಪ್ರಾಥಮಿಕ ಶಿಕ್ಷಣದ ವ್ಯವಸ್ಥೆ ಮಾಡುವಾಗಲೆ ಆಯಾ ಪ್ರಾದೇಶಿಕ ಭಾಷೆಗಳನ್ನು ಕಲಿಯಬೇಕಾದುದು ಕರ್ತವ್ಯ ಮತ್ತು ಅವಶ್ಯವಾಗಿದೆ. ಪ್ರಾಂತದಲ್ಲಿದ್ದ ಆಂಗ್ಲೊ-ಉರ್ದು ಹಾಯಸ್ಕೂಲಗಳನ್ನು ಪ್ರತ್ಯೇಕವಾಗಿ ನಡೆಸುವದನ್ನು ನಿಲ್ಲಿಸಲಾಗುವದೆಂದು ಸರಕಾರದವರು ನಿರ್ಧರಿಸಿದ್ದು ಸಮಂಜಸವಾಗಿದೆ. ಸ್ವತಂತ್ರ ಹಿಂದುಸ್ತಾನದಲ್ಲಿ ಪ್ರತ್ಯೇಕ ಜಾತೀಯ ಶಿಕ್ಷಣ ಸಂಸ್ಥೆಗಳಿಗಾಗಿ ಸರಕಾರದವರು ಹೇರಳ ಹಣ ವೆಚ್ಚ ಮಾಡುವದು ನ್ಯಾಯ್ಯವಾಗಲಾರದು.

### ಮುಂಬಯಿಯಲ್ಲಿ ಮತ್ತೆ ದೊಂಬಿ

ಮುಂಬಯಿಯಲ್ಲಿ ಮಹಾರಬಾವಡಿ ಭಾಗದಲ್ಲಿ ೪ ನೇ ತಾರೀಕು ರಾತ್ರಿ ೧೦ ಗಂಟೆಗೆ ಓರ್ವ ಮನುಷ್ಯನನ್ನು ಟ್ರಾಮಿನಿಂದ ಕೆಳಗೆ ನೂಕಿದ್ದರ ಪರಿಣಾಮವಾಗಿ ಜಾತೀಯ ದೊಂಬಿ ಸಂಭವಿಸಿತು. ಅದು ಕೂಡಲೆ ಅಗ್ರಪಾಡ, ಪಾಯಧುನಿ, ಡೊಂಗ್ರಿ ಭಾಗಗಳಿಗೆ ಹಬ್ಬಿಕೊಂಡಿತು. ತತ್ಪರಿಣಾಮವಾಗಿ ಕಲ್ಲುಗಳ ತೂರಾಟ, ಚೂರಿ ಹಲ್ಲೆ ಮೊದಲಾದವುಗಳು ನಡೆಯಹತ್ತಿದ್ದರಿಂದ ಪೋಲೀಸರು ಗೋಳೀಬಾರು ಮಾಡಬೇಕಾಯಿತು. ಗಲಭೆಗಳ ಪರಿಣಾಮವಾಗಿ ಮತ್ತು ಗೋಳೀಬಾರಿನಿಂದ ೩೬ ಜನರು ಸತ್ತಿದ್ದು ೯೫ ಜನರಿಗೆ ಗಾಯಗಳಾಗಿರಬೇಕೆಂದು ಅಂದಾಜು ಮಾಡಲಾಗಿದೆ. ಕರ್ಫ್ಯೂ ಹುಕುಮು ಜಾರಿಯಲ್ಲಿ ತರಲಾಗಿದೆ. ಕೆಲ ಪ್ರದೇಶಗಳಲ್ಲಿ ಸಾದಾ ಉಡುಪುಗಳಲ್ಲಿ ನೂರಾರು ಪೋಲೀಸರಿಗೆ ಅಡ್ಡಾಡಲಿಕ್ಕೆ ವಿಧಿಸಲಾಗಿದ್ದು ಗಲಭೆ ಮಾಡಲೆತ್ನಿಸುವ ಇಲ್ಲವೆ ಇರಿಯಲು ಪ್ರಯತ್ನಿಸುವವರನ್ನು ಗುಂಡಿಕ್ಕಿ ಹೊಡೆಯಲು ಅವರಿಗೆ ಅಜ್ಞಾಪಿಸಲಾಗಿದೆ. ಹೀಗೆ ಅವರು ಗುಂಡು ಹಾರಿಸುವಾಗ ಇತರರು ಗೋಡೆಯ ಮರೆಗೆ ನಿಂತುಕೊಳ್ಳಬೇಕು; ಇಲ್ಲವೆ ನೆಲದ ಮೇಲೆ ಮಲಗಬೇಕು ಎಂದು ಮುಂತಾಗಿ ಪೋಲೀಸ ಕಮೀಶನರರು ಪ್ರಕಟನೆ ಹೊರಡಿಸಿದ್ದಾರೆ. ಕೇವಲ ಕ್ಷುಲ್ಲಕ ಕಾರಣಗಳಿಗಾಗಿ ಮೇಲಿಂದ ಮೇಲೆ ಏಳುತಿರುವ ಇಂಥ ಗಲಭೆಗಳ ಸದ್ದನ್ನು ಅಡಗಿಸಲು ಸರಕಾರದವರು ಈ ಬಗೆಯ ಉಗ್ರ ಕ್ರಮವನ್ನು ಕೈಕೊಳ್ಳಲಣಿಯಾದುದು ಸ್ವಾಗತಾರ್ಹವೆಂದೇ ಹೇಳಬೇಕಾಗುವದು. ಕೆಲ ಸಮಯ ಇಂಥ ಹುಕುಮುಗಳಿಂದ ನಿರಪರಾಧಿಗಳಿಗೆ ತೊಂದರೆಯಾಗುವುದೇನೋ ನಿಜ. ಆದರೆ ಅಶಾಂತತೆಯನ್ನು ಹೋಗಲಾಡಿಸಿ ಸಂಪೂರ್ಣ ಶಾಂತಿಯ[illegible] ದೇಶದಲ್ಲಿ ಪ್ರಸ್ಥಾಪಿಸಬೇಕಾದ[illegible] ಅಧಿಕಾರಿಗಳು ಉಗ್ರ ಕ್ರಮ ಕೈಕೊಳ್ಳುವ[illegible]ದು ಅವಶ್ಯವೆನಿಸುತ್ತದೆ.

ಹರಿಜನ ಅಗ್ರಲೇಖ

# ವಾಕ್ ಪೌರುಷ

ಕಳೆದ ವಾರ ನಾನು ಕಾಂಗ್ರೆಸ್ಸಿನ ಅಧೋಗತಿಗೆ ಇನ್ನೂ ಕೆಲ ಕಾರಣಗಳನ್ನು ಕೊಡುವದಾಗಿ ಹೇಳಿದ್ದೆ. ನಾವು ಹೇಳುವದರಲ್ಲಿ ವಿಶೇಷ ವಿಶ್ವಾಸವಿಲ್ಲದೆ ಮತ್ತು ನಾವು ಕೊಡುವ ವಚನಗಳನ್ನು ಪೂರೈಸುವ ಅಭಿಪ್ರಾಯವೇ ಇಲ್ಲದೆ ಹೇಳಿಕೆ ಹೊರಡಿಸುವ ಮತ್ತು ವಚನ ಕೊಡುವ ಚಟವೂ ಅವುಗಳಲ್ಲೊಂದು. ಇದು ಬಹಳ ಹಳೆಯ ಅಪರಾಧ. ಕೆಲ ಮೇಲ್ತರಗತಿಯ ನಾಯಕರಿಂದ ಹಿಡಿದು ಚಿಲ್ಲರೆ ಮುಂದಾಳುಗಳ ತನಕ ಹೆಚ್ಚು ಕಡಿಮೆ ಎಲ್ಲರಿಗೂ ಅದು ಅಂಟಿಕೊಂಡಿದೆ.

'ಕೆಲವು ತಪ್ಪುಗಳನ್ನು ಎತ್ತಿ ತೋರಿಸುವೆ. ಗಾಂಧೀಜಿಯ ಪಾಲಿಗೆ, ಮೊದಲಿನ ಕಾಲದಲ್ಲಿ ಶಾಸನ ಸಭೆ, ಸ್ಥಾನಿಕ ಸಂಸ್ಥೆ, ನಗರ ಸಭೆ ಮೊದಲಾದವುಗಳ ಚುನಾವಣೆಗಳನ್ನು ಹೋರಾಡುವದು ಮತ್ತು ಮುಂದೆ ಕಾಂಗ್ರೆಸ್ ಸಮಿತಿಗಳಲ್ಲಿ ಅಧಿಕಾರಸ್ಥಾನಗಳನ್ನು ಸಂಪಾದಿಸುವದೇ ಮೊದಲಾದವುಗಳನ್ನೊಳಗೊಂಡ ರಾಜಕೀಯ ಕಾರ್ಯಕ್ರಮಕ್ಕಿಂತ ವಿಧಾಯಕ ಕಾರ್ಯಕ್ರಮವೇ ಹೆಚ್ಚು ಮಹತ್ವದ್ದಾಗಿತ್ತು. ಪ್ರತ್ಯಕ್ಷ ಹೋರಾಟದ ಆಂದೋಲನಗಳು ಪ್ರಾರಂಭವಾದಾಗಲೆಲ್ಲ ಇವೆರಡೂ ಕಾರ್ಯಕ್ರಮಗಳು ಅಡಗಿ, ಕಾಂಗ್ರೆಸ್ಸಿಗರೆಲ್ಲ, ಅವರು ರಾಜಕೀಯ ವಿಭಾಗದವರಿದ್ದಿರಲಿ ಅಥವಾ ವಿಧಾಯಕ ಕಾರ್ಯಕರ್ತರಿದ್ದಿರಲಿ ಸೆರಮನೆಗಳನ್ನು ತುಂಬುವದರಲ್ಲಿ ಮಗ್ನರಾಗುತ್ತಿದ್ದರು. ಆಮೇಲೆ ಕೆಲ ಸಮಯದಲ್ಲಿ ಚಳವಳಿ ತಣಿದೇ ತಣಿಯುತ್ತಿತ್ತು ಮತ್ತು ಕಾರ್ಯಕರ್ತರಲ್ಲಿ ಹಲಕೆಲವರು ಬಿಡುಗಡೆ ಹೊಂದುತ್ತಿದ್ದರು. ಆದರೆ ಅಖಿಲ ಭಾರತ ಮುಂದಾಳುಗಳ ಬಿಡುಗಡೆಗಿಂತ ಮೊದಲೇ ಹೀಗೆ ಹೊರಬಂದವರು ಒಳ್ಳೇ ಪೇಚಿನಲ್ಲಿ ಸಿಕ್ಕುತಿದ್ದರು. ಚಳವಳಿಯನ್ನು ಇತ್ತ ಹಿಂತೆಗೆದುಕೊಳ್ಳದೆಯೂ ಅತ್ತ ಮುಂದೊತ್ತದೆಯೂ ಇದ್ದ ಈ ಮಧ್ಯಕಾಲದಲ್ಲಿ ತಮ್ಮ ಇರವನ್ನು ಹೇಗೆ ಸಾರ್ಥಕಗೊಳಿಸಿಕೊಳ್ಳಬೇಕೆಂದು ಅವರಿಗೆ ಬಗೆಹರಿಯುತ್ತಿದ್ದಿಲ್ಲ. ಸಾಮಾನ್ಯವಾಗಿ ಎಲ್ಲರೂ ಗಾಂಧೀಜಿಯ ವಿಧಾಯಕ ಕಾರ್ಯಕ್ರಮವನ್ನು ಏಕಕಂಠದಿಂದ ಪ್ರಶಂಸಿಸುತ್ತಿದ್ದ ಸಮಯಗಳು ಇಂಥವೇ.

ಕಾಂಗ್ರೆಸ್ಸಿಗರದುರ್ದೈವದಿಂದ ಈ ಮಾತುಗಳನ್ನು ಜನರು ನಿಜವೆಂದೇ ನಂಬಿದರು. ವಿಧಾಯಕ ಕಾರ್ಯಕರ್ತರೂ ಅವರ ಸಂಘಗಳೂ ಕಾಂಗ್ರೆಸ್ಸಿಗೆ ಅಧಿಕಾರ ಸಿಕ್ಕಿದ ಮೇಲೆ ದೇಶದ ಆರ್ಥಿಕ ಅಭ್ಯುದಯದ ಧೋರಣೆಯಲ್ಲಿ ವಿಧಾಯಕ ಕಾರ್ಯಕ್ರಮಕ್ಕೆ ಗೌರವದ ಸ್ಥಾನ ದೊರಕಬಹುದೆಂದು ಆಶೆಯಿಟ್ಟುಕೊಂಡರು. ಆದುದರಿಂದ ಇನ್ನೇನು ಕಾಂಗ್ರೆಸ ಮಂತ್ರಿಮಂಡಲಗಳು ಬರುವವೆಂದಾಗ ವಿಧಾಯಕ ಕಾರ್ಯಕ್ರಮದ ಏಳಿಗೆಯ ದಿನ ಬಂತೆಂದು ಇವರು ಧೈರ್ಯಗೊಂಡರು.

ಆದರೆ ಕಾಂಗ್ರೆಸ್ಸು ಪುನಃ ರಾಜಕೀಯ ಪಕ್ಷವಾಗಿ ಕಾರ್ಯಮಾಡತೊಡಗಿದ್ದೇ ತಡ, ವಿಧಾಯಕ ಕಾರ್ಯಕ್ರಮ ಮರೆತು ಹೋಗಿ ಚುನಾವಣೆಗಳು ಮತ್ತು ನೇಮಕಗಳು ಮಾತ್ರವೇ ಕಾಂಗ್ರೆಸ ಚಟುವಟಿಕೆಗಳಾಗಿ ಬಿಟ್ಟವು. ಕೆಲವೇ ದಿನಗಳ ಮೊದಲು ಗಾಂಧೀ ಕಾರ್ಯಕ್ರಮವನ್ನು ಉಪದೇಶಿಸುತ್ತಿದ್ದವರು ಒಮ್ಮಿಂದೊಮ್ಮೆ ಅದು ವ್ಯವಹಾರ್ಯವೋ ಎಂಬ ಶಂಕೆಯನ್ನು ಪ್ರಕಟಿಸತೊಡಗಿದರು. ಕಾರ್ಯಕ್ರಮ ಆರ್ಥಿಕವಿದ್ದಿರಲಿ ಸಾಮಾಜಿಕವೇ ಇದ್ದಿರಲಿ, ಅದಕ್ಕೂ ತನಗೂ ಏನೂ ವಿಶೇಷಸಂಬಂಧವಿಲ್ಲೆಂದು ಸಾಮಾನ್ಯ ಕಾಂಗ್ರೆಸ್ಸಿಗನ ಭಾವನೆಯಾಯಿತು, ಅದು ವಿಧಾಯಕ ಕಾರ್ಯಕರ್ತರ ಕ್ಷೇತ್ರವೆಂದುಕೊಂಡನವನು. ಕೆಲವರಂತೂ ವಿಧಾಯಕ ಕಾರ್ಯಕ್ರಮದ ಅರ್ಥವೇ ತಮಗಾಗಿಲ್ಲವೆಂದು ಬಾಯಿಬಿಟ್ಟು ಒಪ್ಪಿಕೊಂಡುಬಿಟ್ಟರು. ಇನ್ನು ಕೆಲವರು ಅದು ರಾಜಕೀಯ ಕ್ಷೇತ್ರದಲ್ಲಿ ಕೆಲಸಮಾಡಲಾರದವರಿಗೆ, ಅರ್ಥಾತ್ ಅದಕ್ಕೆ ಅಯೋಗ್ಯರೆನಿಸುವಷ್ಟು ಸಜ್ಜನಿಕೆಯುಳ್ಳವರಿಗೆ (ದಡ್ಡರಿಗೆ ಎಂದು ಅಂತರ್ಯ) ಹೇಳಿಸಿದ ಕೆಲಸವೆಂದು ಹೇಳಿದರು. ರಾಜಕೀಯ ಕಾರ್ಯಕ್ರಮ ತಾನೇ ತಾನಾಗಿ ಅಹಿಂಸಾ ಸಿದ್ಧಾಂತ ಕೂಡ ಸಂಶಯಾತ್ಮಕವೆನಿಸಿಬಿಟ್ಟಿತು.

೧೯೩೭ ರ ಅಧಿಕಾರಾವಧಿಯಲ್ಲಿ ಆಶಾಭಂಗವಾಗಲು ಬಹಳ ಕಾಲ ಹಿಡಿಯಲಿಲ್ಲ. ಆದರೆ ಆಶಾವಾದಿಗಳು ಆಶಾಭಂಗಕ್ಕೆ ಸಮಾಧಾನ ಹುಡುಕುವದರಲ್ಲಿ ಎಂದೂ ಹಿಂದೆ ಬೀಳುವದಿಲ್ಲ. ೧೯೩೭ ರಲ್ಲಿ ವಿಧಾಯಕ ಕಾರ್ಯಕ್ರಮಕ್ಕೆ ದೊರೆತ ಅರೆಮನಸಿನ ಮಮತೆಗೆ ಆಗ ಸಿಕ್ಕಿದ್ದ ಅಧಿಕಾರ ಅಪೂರ್ಣವಾಗಿದ್ದುದೆ ಕಾರಣವೆಂದು ಅವರು ಅಂದುಕೊಂಡರು. ಪೂರ್ಣ ಸ್ವರಾಜ್ಯ ದೊರೆತ ಮೇಲೆ ಧೋರಣೆ ಬದಲಾದೀತು. ಅದುಕಾರಣ, ದಿಲ್ಲಿಯ ಗಾದಿಯನ್ನು ಕಾಂಗ್ರೆಸ್ಸು ಏರಿದಾಗ ಪುನಃ ಆಶೆಗಳು ಚಿಗುರಿದವು. ಆದರೆ ಮತ್ತೆ ಆಶಾಭಂಗವಾಗಲು ಅಷ್ಟೇನೂ ವಿಲಂಬವಾಗಲಿಲ್ಲ.

ಕಾಂಗ್ರೆಸ್ಸು ತನ್ನದೇ ಆದ ಆರ್ಥಿಕ ಧೋರಣೆಗಳನ್ನು ಪ್ರಚುರಗೊಳಿಸಿರದಿದ್ದರೆ, ಘೋಷಣೆಗಳನ್ನು ಪ್ರಕಟಿಸಿರದಿದ್ದರೆ, ಕಾರ್ಯಕ್ರಮಗಳನ್ನು ಸಿದ್ಧಗೊಳಿಸಲು ಸಮಿತಿಗಳನ್ನು ನಿಯಮಿಸಿರದಿದ್ದರೆ, ಅಥವಾ ಹಾಗೆ ಮಾಡುವಾಗ ಕಾಂಗ್ರೆಸ್ಸಿನ ಆರ್ಥಿಕ ಕಾರ್ಯಕ್ರಮವನ್ನು ಗಾಂಧೀ ಕಾರ್ಯಕ್ರಮದೊಡನೆ ಕಲಬೆರಕೆ ಮಾಡಿಕೊಳ್ಳತಕ್ಕದ್ದಲ್ಲೆಂದು ಸ್ಪಷ್ಟವಾಗಿ ಸಾರಿದ್ದರೆ; ವಿಧಾಯಕ ಸಂಘಗಳನ್ನು ತನ್ನ ಆಶ್ರಯದಲ್ಲಿ ನಿರ್ಮಿಸಿರದಿದ್ದರೆ, ಅಥವಾ ಕನಿಷ್ಠ ಅಧಿಕಾರಕ್ಕೆ ಬಂದ ಮೇಲಾದರೂ ಕಾಂಗ್ರೆಸ್ಸು ಸಾರ್ವಜನಿಕ ವೇದಿಕೆಗಳಲ್ಲಿ ಪ್ರತಿಪಾದಿಸಿದ್ದ ಕಾರ್ಯಕ್ರಮವನ್ನು ಆಚರಣೆಗೆ ತರಲು ಕಾರಣಾಂತರದಿಂದ ಅದೀಗ ಅಸಮರ್ಥವಾಗಿದೆಯೆಂದೂ ವಸ್ತುಸ್ಥಿತಿಯನ್ನು ಅನುಲಕ್ಷಿಸಿ ಆ ಯೋಜನೆಯನ್ನು ಆಚರಣೆಗೆ ತರುವಲ್ಲಿ ಮಹತ್ತರವಾದ ಬದಲಾವಣೆಗಳನ್ನು ಮಾಡಬೇಕಾಗುವದೆಂದೂ ಸ್ಪಷ್ಟವಾಗಿ ತಿಳಿಸಿದ್ದರೆ, ಅಥವಾ ಏನಿಲ್ಲೆಂದರೂ—ಹಳ್ಳಿಗರು ಮೊದಲಾಗಿ ಜನರಾರೂ ಹಳ್ಳಿಯ ಕೈಗಾರಿಕೆಗಳೇ ಮೊದಲಾದ ಗಾಂಧೀವಾದಿ ಆರ್ಥಿಕ ಕಾರ್ಯಕ್ರಮಗಳನ್ನು ಅಪೇಕ್ಷಿಸುವದಿಲ್ಲವಾಗಿ, ಜನರಿಗೆ ಬೇಡೆನಿಸಿದ ಗಾಂಧೀ ಯೋಜನೆಯನ್ನು ಅವರ ಮೇಲೆ ಹೇರಲು ಕಾಂಗ್ರೆಸ್ಸಿಗೆ ಇಷ್ಟವಿಲ್ಲೆಂದಾದರೂ ಹೇಳಿದ್ದರೆ, ಜನರು ಈಗ ನಿರೀಕ್ಷಿಸುತಿರುವದನ್ನು ನಿರೀಕ್ಷಿಸುತ್ತಲೂ ಇರಲಿಲ್ಲ, ಅದು ದೊರೆಯಲಿಲ್ಲೆಂದು ನಿರಾಶೆಗೊಂಡು ಸಿಟ್ಟಾಗುತ್ತಲೂ ಇರಲಿಲ್ಲ. ಆದರೆ ಕಾಂಗ್ರೆಸ್ಸಿಗರು ಅಷ್ಟು ಕೂಡ ಹೇಳಲಿಲ್ಲ. ಅವರು ವಿಕೇಂದ್ರೀಕರಣ, ಗ್ರಾಮೋದ್ಯೋಗ ಮತ್ತು ಚರಕ ಇವುಗಳಲ್ಲಿ ಅವಿಶ್ವಾಸವನ್ನು ಪ್ರಕಟಿಸಲೂ ಇಲ್ಲ, ಈಗಲೂ ಪ್ರಕಟಿಸುವದಿಲ್ಲ. ಆದರೆ ಕೃತಿಯಲ್ಲಿ ಮಾತ್ರ ಏನೂ ಕಾಣುವದಿಲ್ಲ. ಕಾಂಗ್ರೆಸ್ಸು ತಾನು ಹೊರಡಿಸಿದ ಘೋಷಣೆಯಲ್ಲಿ ತನಗೆ ವಿಶ್ವಾಸ ಉಳಿದಿಲ್ಲವೆಂದು ಹೇಳಿಲ್ಲವಾದರೂ ಜನರಿಗೆ ಕಾಣುತಿರುವದೇನು ? ದೊಡ್ಡ ಕಾರಖಾನೆಗಳಿಗೆ– ವನಸ್ಪತಿ ತುಪ್ಪ ಮತ್ತು ಜವಳಿ ಗಿರಣಿಗಳಿಗೆ ಕೂಡ – ಅನುಮತಿ ಕೊಡಲಾಗುತಿದೆ; ದೊಡ್ಡ ಯೋಜನೆಗಳನ್ನು ನಿರ್ಮಿಸಲಾಗುತಿದೆ. ಹಳ್ಳಿಯ ಕೃಷಿ ಕೈಗಾರಿಕೆಗಳ ಪುನರುಜ್ಜೀವನದ ವಿಷಯ ಮಾತ್ರ ಇನ್ನೂ ಸಂದಿಗ್ಧವಾಗಿಯೆ ಉಳಿದಿದೆ.

ಅದೇ ಪ್ರಕಾರ, ಮೂಲ ಶಿಕ್ಷಣ, ಶಿಕ್ಷಣ ಮಾಧ್ಯಮ, ರಾಷ್ಟ್ರ ಭಾಷೆ ಮತ್ತು ಉಚ್ಚ ಶಿಕ್ಷಣ– ಈ ವಿಷಯಗಳಲ್ಲೂ ಜನ ಸಾಮಾನ್ಯರನ್ನು ಮರತೇ ಬಿಡಲಾಗಿದೆ. ಆರ್ಥಿಕ ಧೋರಣೆಯಲ್ಲಿ ಉದ್ದಿಮೆಗಾರರ ಮತ್ತು ಉದ್ದಿಮೆ ಕೂಲಿಕಾರರ ವರ್ಚಸ್ಸು ಮುಖ್ಯವಾಗಿದ್ದಂತೆ ಶಿಕ್ಷಣದ ಮತ್ತು ಶಿಕ್ಷಣ ಮಾಧ್ಯಮದ ಧೋರಣೆಯನ್ನು ಇಂಗ್ಲೀಷು ಬಲ್ಲ ಹೈಸ್ಕೂಲು ಕಾಲೇಜುಗಳ ಅಧ್ಯಾಪಕರೂ ಅತಿ ಪಂಡಿತರೂ ಜಾತೀಯ ಇಲ್ಲವೆ ಪ್ರಾಂತೀಯ ಭಾವನೆಯುಳ್ಳ ರಾಜಕಾರಣಿಗಳೂ ಹೇಳಿದಂತೆ ರೂಪಿಸಲಾಗುತಿದೆ. ಇಂಗ್ಲೀಸಿನಲ್ಲಿ ವಿಚಾರ ಮಾಡಿ ಇಂಗ್ಲಿಷಿನಲ್ಲೆ ಮಾತಾಡುವ ಚಾಳಿಯನ್ನು ಬಿಡುವದಕ್ಕಾಗಲಿ ಪ್ರಾಚೀನ ಕಾಲದ ಸಂಸ್ಕೃತ ಅಥವಾ ಪರ್ಶಿಯನ್ ವಿದ್ವಾಂಸರನ್ನು ಅನುಕರಿಸುವದಕ್ಕಾಗಲಿ ಅವರು ಸಿದ್ಧರಿಲ್ಲ ಆದುದರಿಂದ ಶಿಕ್ಷಣ ಕ್ಷೇತ್ರದಲ್ಲಿ ಇಂಗ್ಲೀಷನ್ನು ಬಿಟ್ಟರೆ ನಡೆಯದೆಂದೂ ಪ್ರಾಂತೀಯ ಭಾಷಾ ಕ್ಷೇತ್ರದಲ್ಲಿ ಸಂಸ್ಕೃತ, ಅರಬ್ಬಿ ಅಥವಾ ಪರ್ಶಿಯನ್ ಭಾಷೆಗಳನ್ನು ಬಿಟ್ಟರೆ ಗತಿಯಿಲ್ಲವೆಂದೂ ಅವರು ವಾದಿಸುತ್ತಾರೆ.

ಹಿಂದುಸ್ತಾನಿಯನ್ನು—– ಅಥವಾ ಅಖಿಲ ಭಾರತ ಭಾಷೆಯನ್ನು ಯಾವದೇ ಹೆಸರಿಂದ ಕರೆಯಿರಿ, ಅದನ್ನು ಕುರಿತು ನಮ್ಮ ಧೋರಣೆಯನ್ನು ನೋಡಿದರೆ, ರೇಲ್ವೆ ನಿಲ್ದಾಣಗಳಲ್ಲಿ ಗಂಟು ಹೊರುವವರು, ಅಂಗಡಿಕಾರರು, ರೈತರೇ ಮೊದಲಾದವರೊಡನೆ ವ್ಯವಹಾರವನ್ನು ಸಾಗಿಸಲು ಇಲ್ಲವೆ ಅವರಿಗೆ ಮನೋರಂಜನೆಯನ್ನುಂಟುಮಾಡಲು ಬೇಕಾದುದಕ್ಕಿಂತ ಹೆಚ್ಚಿಗೆ ಆ ಭಾಷೆಯನ್ನು ಬೆಳೆಸುವ ಉದ್ದೇಶವಿಲ್ಲವೇನೋ ಎನಿಸುತ್ತದೆ. ಕಾಯಿದೆಗಳನ್ನು ಬರೆಯಲು, ತೀರ್ಪುಗಳನ್ನು ಹೇಳಲು, ಒಳ್ಳೆ ಎಚ್ಚರದಿಂದ ಶಬ್ದಪ್ರಯೋಗ ಮಾಡಬೇಕಾದಂಥ ಮಹತ್ವದ ಹೇಳಿಕೆಗಳನ್ನು ಹೊರಡಿಸಲು, ವೈಜ್ಞಾನಿಕ ವಿಷಯಗಳನ್ನು ವಿವರಿಸಲು, ಅತ್ಯುತ್ತಮ ಗದ್ಯಪದ್ಯಗಳನ್ನು ರಚಿಸಲು ಯೋಗ್ಯವಾದ ಭಾಷೆ ಅದಾಗಬೇಕೆಂಬ ವಿಚಾರ ಯಾರಿಗೂ ಇದ್ದಂತಿಲ್ಲ. ಹಿಂದುಸ್ತಾನಿಯ ಮೇಲೆ ಅಭಿಮಾನವುಳ್ಳವರು ತೀರ ವಿರಳ.

ಇದನ್ನೆಲ್ಲ ಪ್ರಸ್ತಾವಿಸಲು ಕಾರಣವೇನಂದರೆ, ಕಾಂಗ್ರೆಸ್ಸು ವರ್ಷವರ್ಷವೂ ಸ್ವೀಕರಿಸುತ್ತ ಬಂದ ಗೊತ್ತುವಳಿಗಳಿಗಿಂತ ನಿಜವಾದ ಆಚರಣೆ ತೀರ ಭಿನ್ನವಾಗಿದೆ. ಈ ನಡೆವಳಿಗೂ ಕುಟಿಲತನಕ್ಕೂ ಬಹಳ ಭೇದವಿಲ್ಲ. ಆದರೂ ನಾನು ಅದನ್ನು ಕುಟಿಲತನವೆಂದು ಕರೆದಿಲ್ಲ. ಏಕೆಂದರೆ ಅನೇಕರಿಗೆ ತಾವು ಹೇಳುತಿರುವದು ನೈಜವಲ್ಲವೆಂದು ತಮ್ಮ ಅಂತರಂಗಕ್ಕೆ ತಿಳಿದಿದ್ದರೂ ಅದು ಅವರ ಲಕ್ಷಕ್ಕೆ ಬರುವದಿಲ್ಲೆಂದು ನನಗನಿಸುತ್ತದೆ. ಕಾಲೇಜಿನ ಉತ್ಸವಗಳಲ್ಲಿ ಶೇಕ್ಸ್ಪಿಯರನ ನಾಟಕದ ಬ್ರೂಟಸ್ ಮತ್ತು ಅಂಟೋನಿಯೋರ ಭಾಷಣಗಳನ್ನು ಬಾಯಿಪಾಠ ಹೇಳಿದಂತೆ ಇದೊಂದು ವಾಗ್ವೈಖರಿಯ ಪ್ರದರ್ಶನವೆಂದು ಹಗುರಾಗಿ ಅವರು ಭಾವಿಸಿರಬಹುದೇ ಹೊರತು ತಮ್ಮ ಸ್ವಂತ ಹೃತ್ಪೂರ್ವಕ ವಾಕ್ಯಗಳವೆಂದು ಅವರಿಗೆ ಧ್ಯಾಸವೇ ಇರುವದಿಲ್ಲೆಂದು ನನಗೆ ತೋರುತ್ತದೆ. ಆ ಅಭ್ಯಾಸ ಉಳಿದು ಹೋಗಿದೆಯಷ್ಟೇ ಅಲ್ಲ ಇನ್ನೂ ಬೆಳೆದಿದೆ. ಸಾಲದ್ದಕ್ಕೆ, ಜಾತೀಯ ಮತ್ತು ಪ್ರಾಂತೀಯ ತಿಕ್ಕಾಟಗಳು ಬೇರೆ. ಇವುಗಳಲ್ಲಿ ಹೊಣೆಗಾರ ಸ್ಥಾನಗಳಲ್ಲಿರುವ ಪ್ರಮುಖರ ಅಂಗವೂ ಇದೆ. ಪರಿಣಾಮವಾಗಿ ಅನೇಕ ವಿಧಾಯಕ ಕಾರ್ಯಕರ್ತರು ಕಾಂಗ್ರೆಸ್ಸೆಂಬದರ ಮೇಲಿನ ವಿಶ್ವಾಸವನ್ನೇ ಕಳೆದುಕೊಂಡಿದ್ದಾರೆ. ಕಾಂಗ್ರೆಸ್ಸಿನ ಕೆಲ ಮೇಲ್ತರಗತಿಯ ಮುಂದಾಳುಗಳ ಮೇಲಿನ ಆದರಾಭಿಮಾನಗಳಿಂದ ಇನ್ನೂ ಅವರು ಕಾಂಗ್ರೆಸ್ಸಿಗೆ ಅಂಟಿಕೊಂಡಿದ್ದಾರೆ. ಅವರ ಮೇಲಿನ ಗೌರವವಾದರೂ ಅವರ ಅನಿಂದ್ಯ ಚರಿತ್ರಬಲ, ಮುತ್ಸದ್ದಿತನ, ವಯಸ್ಸು ಇವುಗಳಿಗಾಗಿ ಹೊರತು ಅವರಿಗೆ ವಿಧಾಯಕ ಕಾರ್ಯಕ್ರಮದ ಮೇಲಿರುವ ವಿಶ್ವಾಸಕ್ಕಾಗಿ ಅಲ್ಲ. ಈ ಗೌರವಭಾವನೆಯಿಂದಲೇ ನಿರ್ದಾಕ್ಷಿಣ್ಯವಾಗಿ ತಮ್ಮ ನಿರಾಶೆಯನ್ನು ವ್ಯಕ್ತಗೊಳಿಸಲು ವಿಧಾಯಕ ಕಾರ್ಯಕರ್ತರು ಹಿಂಜರಿಯುತ್ತಾರೆ. ಆದರೆ ಅವರು ಈ ಮಾತನ್ನು ನಿರ್ದಾಕ್ಷಿಣ್ಯವಾಗಿ ಹೇಳಲಿ ಹೇಳದಿರಲಿ, ಕಾಂಗ್ರೆಸ್ಸಿನ ಮೇಲಿನ ವಿಶ್ವಾಸ ಕಡಿಮೆಯಾಗಿದೆ; ಕಾಂಗ್ರೆಸ್ಸಿಗರು ಕೂಡ ಜಗತ್ತಿನ ಎಲ್ಲ ರಾಜಕಾರಣಿಗಳಿಗಿಂತ ಶ್ರೇಷ್ಠರಲ್ಲ, ಅವರಂತೆ ಇವರಿಗೂ ಜನಸೇವೆಯಲ್ಲಿರುವದಕ್ಕಿಂತ ಚುನಾವಣೆಗಳಲ್ಲಿ ತಮ್ಮ ಸ್ಥಾನಗಳನ್ನು ಭದ್ರಪಡಿಸಿಕೊಳ್ಳುವದರಲ್ಲಿಯೇ ಆಸಕ್ತಿ ಹೆಚ್ಚು, ಎಂಬ ಭಾವನೆ ಜನರಲ್ಲಿ ಉಂಟಾಗಿದೆ.

ಈ ಸಂಬಂಧದಲ್ಲಿ ಮೂವತ್ತೆರಡು ವರ್ಷಗಳ ಹಿಂದಾದ ಒಂದು ಘಟನೆ ನೆನಪಿಗೆ ಬರುತ್ತದೆ. ಲೋಕಮಾನ್ಯ ತಿಲಕರು ಪ್ರಯಾಣ ಮಾಡುತಿದ್ದ ಗಾಡಿಯಲ್ಲೇ ನಾನೂ ಪ್ರಯಾಣ ಮಾಡುತಿದ್ದೆ. ನಾನಿದ್ದ ಡಬ್ಬಿಯಲ್ಲಿ ಐರಿಷ ಸೋಲ್ಜನಿದ್ದ. ಮಧ್ಯರಾತ್ರಿ ಕಳೆದು ಹೋಗಿದ್ದರೂ ಪ್ರತಿಯೊಂದು ನಿಲ್ದಾಣದಲ್ಲಿ ಲೋಕಮಾನ್ಯರನ್ನು ಕಾಣಲು ಜನರು ಕಿಕ್ಕಿರಿದು ತುಂಬಿರುತ್ತಿದ್ದರು. ಐರಿಶ ಸೈನಿಕ ಇದೆಲ್ಲ ಗೊಂದಲವೇನೆಂದು ನನ್ನನ್ನು ಕೇಳಿದ. ಲೋಕಮಾನ್ಯ ತಿಲಕರೆಂದರಾರು, ಹಿಂದೀ ಮುಂದಾಳುಗಳಲ್ಲಿ ಅವರ ಸ್ಥಾನವೇನು, ಎಂದೆಲ್ಲ ನಾನು ಅತನಿಗೆ ತಿಳಿಸಿದೆ. “ ಎಲ್ಲ ಠಕ್ಕು !” ಎಂದನವ. “ ಈ ರಾಜಕಾರಣಿಗಳೆಲ್ಲರದೂ ನನಗೆ ಗೊತ್ತು. ನನ್ನ ದೇಶದಲ್ಲೂ ಅನೇಕ ಮುಂದಾಳುಗಳಿದ್ದಾರೆ. ಅವರಲ್ಲಿ ಒಬ್ಬನಾದರೂ ಹೇಳಿದ್ದನ್ನು ನಂಬುವಂತಿಲ್ಲ.” ಭಾರತದ ನಾಯಕರ ವಿಷಯ ಹೀಗಲ್ಲವೆಂದು ನಾನು ಪ್ರತಿಭಟಿಸಿದೆ. “ ಆಗಲಿ ಸಾಕಷ್ಟು ದೊಡ್ಡವನಾದ ಮೇಲೆ ನಿನಗೇ ಗೊತ್ತಾದೀತು” ಎಂದನವ. “ ಇನ್ನು ನೀನೂ ರಾಜಕಾರಣಿಯೇ ಆಗಿಬಿಟ್ಟರೆ ಏನೋ ನಾ ಹೇಳಲಾರೆ ! ”

ಈ ಕೊಳಕನ್ನು ಹೇಗೆ ನಿವಾರಿಸಬಹುದೆಂದು ಮುಂದಿನ ಲೇಖದಲ್ಲಿ ವಿಚಾರಿಸುವೆವು.

ವರ್ಧಾ ಕಿ. ಘ. ಮಶ್ರುವಾಲಾ

೨೮–೬–೪೬

---

ನಿಜಾಮ ಸರಕಾರದ ಪ್ರಸಿದ್ಧಿ ಶಾಖೆಯ ಅಧಿಕಾರಿಗಳಾದ ಕೆ. ಈಶ್ವರದತ್ತರು ರಾಜಕೀಯ ಕಾರಣಗಳಿಗಾಗಿ ಜುಲೈ ೩ಕ್ಕೆ ರಾಜೀನಾಮೆ ಸಲ್ಲಿಸಿದ್ದಾರೆಂದು ವಿಶ್ವಸನೀಯವಾಗಿ ತಿಳಿಯುತ್ತದೆ.

## ಮನೆ—ಕೈಗಾರಿಕೆ

ಮೊನ್ನೆ ಒಂದು ಸಂದರ್ಶನದಲ್ಲಿ ಬಿಹಾರದ ಹಿಂದಿನ ಮುಖ್ಯಮಂತ್ರಿ ಡಾ. ಸಿನಹಾ ಅವರು ಹೀಗೆಂದರೆಂದು ವರದಿಯಾಗಿದೆ.

'ದೇಶದ ಆರ್ಥಿಕಸ್ಥಿತಿಯನ್ನು ಸುಧಾರಿಸಲು ಮನೆಕೈಗಾರಿಕೆಗಳನ್ನು ಬೆಳೆಸುವುದನ್ನು ಒತ್ತಿ ಹೇಳಿದ ಗಾಂಧಿಯವರ ಮಾತಿಗೆ ನಾನು ಒಪ್ಪುತ್ತೇನೆ. ಜೀವನದ ಮಟ್ಟವು ದೊಡ್ಡ ದೊಡ್ಡ ಉದ್ಯಮಗಳಿಂದಲೇ ಸುಧಾರಿಸುವುದು ಎಂಬ ಮತ್ತೊಂದು ಪಂಥವುಂಟೆಂಬುದನ್ನು ಬಲ್ಲೆ. ಆದರೆ ಗಾಂಧಿಯವರ ಮನೆ ಕೈಗಾರಿಕೆಯ ಯೋಜನೆಯೇ ಸರಿಯಾದುದೆಂಬ ನಿರ್ಣಯಕ್ಕೆ ನಾನು ಬಂದಿದ್ದೇನೆ.''

ಕಳೆದ ವರ್ಷ ಭಾರತಕ್ಕೆ ಬಂದಿದ್ದ ಆಸ್ಟ್ರೇಲಿಯದ ಅರ್ಥಶಾಸ್ತ್ರಜ್ಞ ಶ್ರೀ ಕೊಲಿನ್ ಕ್ಲಾರ್ಕನು ಹೇಳಿದ್ದು ಹೀಗೆ.

''ನಾನೊಬ್ಬ ಹಿಂದೀ ಮಂತ್ರಿಯಾಗಿದ್ದರೆ, ಕಾರಖಾನೆಗಳನ್ನು ಅನಿವಾರ್ಯವಾದ ಕೇಡೆಂದು ಭಾವಿಸಿ ಮನೆ ಕೈಗಾರಿಕೆಯನ್ನೇ ಆದಷ್ಟು ಹೆಚ್ಚಾಗಿ ಅಭಿವೃದ್ಧಿಗೆ ತನ್ನಿರಿ ಎನ್ನುತ್ತಿದ್ದೆ.''

ಹೊರನಾಡಿನ ಮುಖಂಡರ ಮತ್ತು ವಿಚಾರಜ್ಞರ ಇಂಥ ಹೇಳಿಕೆಗಳು ಮುಖ್ಯವಾದವೆಂಬುದರಲ್ಲಿ ಸಂಶಯವಿಲ್ಲ. ಆದರೆ ಅವು ವಿಚಿತ್ರವಾಗಿಯೂ ಇವೆ. ಈ ಪರದೇಶದವರು ಗಾಂಧೀವಾದದ ವಿಕೇಂದ್ರೀಕೃತ ಮನೆಕೈಗಾರಿಕೆಯ ಕ್ರಮದಂತೆ ರಾಷ್ಟ್ರೀಯ ಅರ್ಥಪದ್ಧತಿಯನ್ನು ಅಭಿವೃದ್ಧಿಗೆ ತರುವುದರಲ್ಲಿ ನಿಜವಾಗಿ ನಂಬಿಗೆಯುಳ್ಳವರಾದರೆ ಅವರು ಮನಸ್ಸುಗೊಟ್ಟು ತಮ್ಮ ನಾಡಿನಲ್ಲಿ ಅದನ್ನೇಕೆ ಪ್ರಚುರಪಡಿಸುವುದಿಲ್ಲ? ಐರ್ಲೆಂಡಿನಲ್ಲಿ ಮನೆಕೈಗಾರಿಕೆಗಳನ್ನು ಡಿವಲೆರಾ ಎಷ್ಟರ ಮಟ್ಟಿಗೆ ಅಭಿವೃದ್ಧಿಗೆ ತಂದಿದ್ದಾರೆಂಬುದು ನಮಗೆ ಗೊತ್ತಿಲ್ಲ. ಈಗಲೂ ಅಧಿಕಾರದಲ್ಲಿಲ್ಲದಿದ್ದರೂ ಅವರು ಗಾಂಧೀವಾದದಂತೆ ಜಗತ್ತನ್ನೂ ತಮ್ಮ ನಾಡನ್ನೂ ಅಭಿವೃದ್ಧಿಗೆ ತರಲು ಪ್ರಯತ್ನಿಸಿ ಸೇವೆಸಲ್ಲಿಸಬಹುದು.

ಆದರೆ ಪರದೇಶೀಯರ ಇಂಥ ಹೇಳಿಕೆಗಳು ನಮ್ಮ ಮುಖಂಡರ ಮತ್ತು ಅರ್ಥಶಾಸ್ತ್ರಿಗಳ ಕಣ್ಣು ತೆರೆಸಬೇಕು. ಸುಮಾರು ೩೦ ವರ್ಷಗಳಿಂದ ಗಾಂಧಿಯವರು ಮನೆಕೈಗಾರಿಕೆಯ ಬಗ್ಗೆ ಒತ್ತಿ ಒತ್ತಿ ಹೇಳುತ್ತ ಬಂದಿದ್ದರೂ ವಿಕೇಂದ್ರೀಕೃತ ಅರ್ಥಪದ್ಧತಿಯಲ್ಲಿ ಅತ್ಯಲ್ಪ ಕಾಂಗ್ರೆಸ್ಸಿಗರಿಗೆ ಮಾತ್ರ ಶ್ರದ್ಧೆಯಿದೆ. ಮನೆ ಕೈಗಾರಿಕೆಯ ಕ್ರಮವು ವೈಜ್ಞಾನಿಕವೂ ವಿವೇಕಪೂರ್ಣವೂ ಆದರೂ ದೊಡ್ಡ ಉದ್ಯಮಗಳ 'ಹಿಡಿ ಹಿಡಿ' ಎಂದು ಓಡುತ್ತಿರುವ ಜಗತ್ತಿನಲ್ಲಿ ಭಾರತವೊಂದು ಏಕಾಕಿಯಾಗಿ ನಿಲ್ಲಲಾರದು ಎಂದು ಉಳಿದವರು ವಾದಿಸುತ್ತಾರೆ. ಅಂಥ ಉದ್ಯಮಪದ್ಧತಿಯಿಂದಾಗುವ ಕೇಡುಗಳು ಆಗಲೇ ಸ್ಪಷ್ಟವಾಗಿವೆ ಮತ್ತು ತಕ್ಕ ಕಾಲದಲ್ಲಿ ಪಾಶ್ಚಾತ್ಯ ದೇಶಗಳು ತಮ್ಮ ದೃಷ್ಟಿಕೋನ ಮತ್ತು ಆರ್ಥಿಕ ಧೋರಣೆಗಳಲ್ಲಿ ಕ್ರಾಂತಿಕಾರಕ ಬದಲಾವಣೆಗಳನ್ನು ಮಾಡದಿದ್ದರೆ ನಾವು ಸದ್ಯದಲ್ಲೇ ಅಭೂತಪೂರ್ವವಾದ ದುಃಸ್ಥಿತಿ ತರುವಂಥ ದುರಂತ ಸಮರದ ನಡುವೆ ಬಿದ್ದು ಬಿಟ್ಟೇವು. ಆಧುನಿಕ ಪ್ರಪಂಚಕ್ಕೆ ಹಿಡಿದ ರೋಗಗಳ ನಿವಾರಣೆಗೆ ಸಂಜೀವನಿ ಎಂದು ನಮ್ಮ ರಾಷ್ಟ್ರಪಿತನು ಹೇಳಿದ ರಾಷ್ಟ್ರೀಯ ಅರ್ಥಪದ್ಧತಿಯನ್ನು ಒಮ್ಮೆ ಜಾರಿಗೆ ತಂದು ನೋಡಬಾರದೇಕೆ? ಪಾಶ್ಚಾತ್ಯರನ್ನು ಅನುಸರಿಸುವುದೊಂದನ್ನೇ ಭಾರತವು ಯೋಚಿಸಕೂಡದು; ಅದು ಇತರ ನಾಡುಗಳನ್ನು ಉತ್ತಮವೂ ವಿವೇಕಯುಕ್ತವೂ ಆದ ಸಾಮಾಜಿಕ ಆರ್ಥಿಕ ಸಂಘಟನೆಯತ್ತ ಒಯ್ಯಬೇಕಾಗಿದೆ. ಅಥವಾ ಪಾಶ್ಚಾತ್ಯ ಪ್ರಭುತ್ವಗಳು ವಿಕೇಂದ್ರೀಕೃತ ಉದ್ಯಮಪದ್ಧತಿಯನ್ನು ಬಳಸುವ ವರೆಗೆ ನಾವು ಕಾದು ಅನಂತರ ಪಶ್ಚಿಮದಿಂದ ಗಾಂಧೀವಾದವನ್ನು ಆಯಾತ ಮಾಡಿಕೊಳ್ಳೋಣವೆ? ಇದು ಅತ್ಯಂತ ಹೆಚ್ಚಿನ ರಾಷ್ಟ್ರೀಯ ದುರಂತವೆಂದು ನನಗೆನಿಸುತ್ತದೆ.

ವರ್ಧಾ

೩೦–೬–೪೬ —ಎಸ್. ಎನ್. ಅಗರವಾಲ

---

## ಪ್ರಾಂತೀಕರಣ ಸಮಿತಿಯ ಪ್ರಾಸ್ತಾವಿಕ ಸಭೆ

ಘಟನಾ ಸಮಿತಿಯ ಅಧ್ಯಕ್ಷರು ನೇಮಿಸಿದ ಭಾಷಾನುಗುಣ ಪ್ರಾಂತೀಕರಣ ಸಮಿತಿಯ ಪ್ರಾಸ್ತಾವಿಕ ಸಭೆಯು ದಿಲ್ಲಿಯಲ್ಲಿ ಕೌನ್ಸಿಲ ಭವನದೊಳಗೆ ತಾ ೧೯ಕ್ಕೆ ಕೂಡತಕ್ಕದ್ದಿದೆಯೆಂದು ಘಟನಾ ಸಮಿತಿಯ ಕಚೇರಿಯಿಂದ ಅಧಿಕೃತ ಪ್ರಕಟನೆ ಹೊರಬಿದೆ.

# ಮೈಸೂರು ಟಿಪ್ಪಣಿಗಳು ೨

## ಹಿಂದೀ ಸಂಸ್ಥಾನಗಳ ಶ್ವೇತಪತ್ರ

### ಒಂದು ವರ್ಷದಲ್ಲಿ ಸಾಧಿಸಿದ ಕಾರ್ಯ

ಹಿಂದುಸ್ಥಾನ ಸರಕಾರದ ಸಂಸ್ಥಾನ ಶಾಖೆಯುವರು ತಮ್ಮ ಶಾಖೆಯ ಸ್ಥಾಪನೆಯ ಪ್ರಥಮ ವರ್ಷದ ಸವಿ ನೆನಪಿಗಾಗಿ ತಾವು ಸಾಧಿಸಿದ ಮಹಾ ಕಾರ್ಯದ ಶ್ವೇತಪತ್ರವೊಂದನ್ನು ಪ್ರಸಿದ್ಧಿಸಿದ್ದಾರೆ. ಈ ಒಂದು ವರ್ಷದಲ್ಲಿ ಅವರು ಸಾಧಿಸಿದ ಈ ರಕ್ತರಹಿತ ಕ್ರಾಂತಿಯು ನಿಜವಾಗಿಯೂ ಅಭಿನಂದನೀಯವಾಗಿದೆ. ಆ ಶ್ವೇತಪತ್ರದಲ್ಲಿಯ ಮುಖ್ಯಾಂಶಗಳಂತಿವೆ—

### ನಾಲ್ಕು ಭಾಗಗಳು

ಇದರಲ್ಲಿ ನಾಲ್ಕು ಭಾಗಗಳನ್ನಾಗಿ ಮಾಡಲಾಗಿದೆ. ಮೊದಲಿನ ಎರಡು ಭಾಗಗಳಲ್ಲಿ ಸಂಸ್ಥಾನ ಸಮಸ್ಯೆಯ ಐತಿಹಾಸಿಕ ಹಾಗು ರಾಜಕೀಯ ಹಿನ್ನೆಲೆಯನ್ನು ವಿವರಿಸಲಾಗಿದೆ. ಮೂರನೆಯ ಭಾಗದಲ್ಲಿ ಹಿಂದುಸ್ತಾನದಲ್ಲಿ ಸ್ವಾತಂತ್ರ್ಯ ಸ್ಥಾಪನೆಯಾದ ನಂತರ ಸಂಸ್ಥಾನಗಳು ಅದರಲ್ಲಿ ಸೇರ್ಪಡೆಯಾಗುವ ವರೆಗಿನ ಘಟನೆಗಳನ್ನು ಕೊಡಲಾಗಿದೆ. ಕೊನೆಯ ಭಾಗದಲ್ಲಿ ಸಂಸ್ಥಾನಗಳ ಸಮೀಕರಣ ಹಾಗು ಜೊತೆಗಾರ ಸರಕಾರ ಸ್ಥಾಪನೆ ಮುಂತಾದ್ದನ್ನು ವಿವರಿಸಲಾಗಿದೆ. ಹೈದರಾಬಾದ ಕಾಶ್ಮೀರ ಮತ್ತು ಜುನಾಗಡ ಸಂಸ್ಥಾನಗಳಲ್ಲಿ ಘಟನೆಗಳೆ ಬೇರೆ ಸ್ವರೂಪದಲ್ಲಿ ಸಾಗಿದ್ದರಿಂದ ಅವುಗಳ ಬಗ್ಗೆ ಈ ಶ್ವೇತಪತ್ರದಲ್ಲಿ ಏನನ್ನೂ ವಿವರಿಸಲಾಗಿಲ್ಲ. ಇದರಲ್ಲಿ ಎರಡು ಬಣ್ಣದ ನಕಾಶೆಗಳಿದ್ದು, ವಿಲೀನ ಹೊಂದಿದ ಸಂಸ್ಥಾನಗಳನ್ನು ಒಂದು ಬಣ್ಣದಲ್ಲಿ ಮತ್ತು ಒಕ್ಕೂಟ ರಚಿಸಿಕೊಂಡ ಸಂಸ್ಥಾನಗಳನ್ನು ಮತ್ತೊಂದು ಬಣ್ಣದಲ್ಲಿ ತೋರಿಸಲಾಗಿದೆ. ಕೊನೆಯಲ್ಲಿ ಜೋಡಿಸಿದ ಪರಿಶಿಷ್ಟದಲ್ಲಿ ಸಂಸ್ಥಾನ ಸಂಬಂಧದ ಕಾಗದ ಪತ್ರಗಳನ್ನು ಕೊಡಲಾಗಿದೆ.

### ಘಟನಾತ್ಮಕ ಸ್ಥಾನ

ಸ್ವತಂತ್ರ ಹಿಂದುಸ್ತಾನದಲ್ಲಿ ಸಂಸ್ಥಾನಗಳಿಗೂ ಒಂದು ಘಟನಾತ್ಮಕ ಸ್ಥಾನವನ್ನು ಕಲ್ಪಿಸಿ ಕೊಡುವದಕ್ಕಾಗಿ ಸಂಸ್ಥಾನ ಶಾಖೆಯುವರು ಇವೆಲ್ಲ ಪ್ರಯತ್ನ ಮಾಡಿ ಅಪೂರ್ವವಾದ ಯಶಸ್ಸನ್ನು ಸಾಧಿಸಿದರು. ಸಂಸ್ಥಾನಿಕರು ಕಾಲಮಾನ ಪರಿಸ್ಥಿತಿಯನ್ನು ತಿಳಿದುಕೊಂಡು ಅಧಿಕಾರತ್ಯಾಗಕ್ಕೆ ಸಿದ್ಧರಾದುದರಿಂದ ಈ ಕಾರ್ಯ ಬೇಗ ಸಾಧಿಸಿತೆಂದು ಸಂಸ್ಥಾನ ಶಾಖೆಯುವರು ಅಭಿಪ್ರಾಯ ಪಟ್ಟಿದ್ದಾರೆ. ಸಂಸ್ಥಾನಗಳಲ್ಲಿ ರಾಜರಿಂದ ಪ್ರಜೆಗಳಿಗೆ ಅಧಿಕಾರ ಒಪ್ಪಿಸಿಕೊಡುವದಕ್ಕೂ ಲೀನೀಕರಣ ಮತ್ತು ಒಕ್ಕೂಟ ರಚನೆ ಇವೆರಡೇ ಮಾರ್ಗಗಳೆಂದು ಕಂಡುಬಂದದ್ದರಿಂದ ಅದರ ಪ್ರಯೋಗದಿಂದ ಉದ್ದೇಶವನ್ನು ಸಾಧಿಸಲಾಯಿತು.

ನೆರೆ ಪ್ರಾಂತಗಳಲ್ಲಿ ಲೀನ ಹೊಂದಿದ ಸಂಸ್ಥಾನಗಳ ಸಂಖ್ಯೆ ೨೧೯, ಒಟ್ಟು ಕ್ಷೇತ್ರ ೮೪೭೭೪ ಚದುರ ಮೈಲು ಜನಸಂಖ್ಯೆ ೧೨೦೧೮ ಲಕ್ಷ ಉತ್ಪನ್ನ ೫೮೧೮ ರೂ. ಗಳಷ್ಟಿದೆ. ಇವುಗಳಲ್ಲಿ ಓರಿಸಾದಲ್ಲಿ ೨೩, ಮಧ್ಯಪ್ರಾಂತದಲ್ಲಿ ೨, ಮದ್ರಾಸದಲ್ಲಿ ೨ ಪೂರ್ವ ಪಂಜಾಬದಲ್ಲಿ ೩ ಮತ್ತು ಮುಂಬಯಿ ಪ್ರಾಂತದಲ್ಲಿ ೧೬೯ ಸಂಸ್ಥಾನಗಳು ಲೀನವಾಗಿವೆ.

ನೇರವಾಗಿ ಕೇಂದ್ರ ಸರಕಾರದ ಅಧೀನದಲ್ಲಿ ಬಂದ ಸಂಸ್ಥಾನಗಳು ೨೨ ಇದ್ದು ಅವುಗಳ ಕ್ಷೇತ್ರ ೧೯.೦೫೧ ಚದುರು ಮೈಲು. ಜನಸಂಖ್ಯೆ ೧೪.೩೭ ಲಕ್ಷ, ಉತ್ಪನ್ನ ೧೬೪.೫೬ ಲಕ್ಷ ರೂಪಾಯಿಗಳಷ್ಟಿದೆ. ಇವುಗಳಲ್ಲಿ ಹಿಮಾಚಲ ಪ್ರದೇಶ ಒಂದು. ಇದರಲ್ಲಿ ೨೧ ಸಂಸ್ಥಾನಗಳು ಲೀನವಾಗಿವೆ. ಕಚ್ಛ ಸಂಸ್ಥಾನವೂ ಕೇಂದ್ರ ಸರಕಾರದ ನೇರವಾದ ಆಡಳಿತದಲ್ಲಿದೆ.

ಸಂಸ್ಥಾನಗಳ ಒಕ್ಕೂಟ ಯೋಜನೆಯಲ್ಲಿ ೨೯೧ ಸಂಸ್ಥಾನಗಳು ಸೇರಿವೆ. ಅವುಗಳ ಕ್ಷೇತ್ರ ೧೩೪೪೦೦ ಚದುರು ಮೈಲು, ಜನಸಂಖ್ಯೆ ೨೩೭.೬೪ ಲಕ್ಷ ರೂ. ಉತ್ಪನ್ನ ೨೪೦೯.೪೫ ಲಕ್ಷ ರೂಪಾಯಿಗಳಷ್ಟಿದೆ. ಸೌರಾಷ್ಟ್ರ ಮತ್ಸ್ಯ ವಿಂಧ್ಯ ಪ್ರದೇಶ ರಾಜಸ್ಥಾನ ಮಧ್ಯಭಾರತ, ಪಟಿಯಾಲಾ ಮತ್ತು ಪೂರ್ವ ಪಂಜಾಬ ಸಂಸ್ಥಾನಗಳ ಒಕ್ಕೂಟ ಹೀಗೆ ಒಟ್ಟು ೬ ಒಕ್ಕೂಟಗಳಿವೆ. ರಾಜಪ್ರಜೆಗಳಿಬ್ಬರೂ ಒಪ್ಪದಿದ್ದರೆ ಒಕ್ಕೂಟದಲ್ಲಿ ಸೇರಲು ಒತ್ತಾಯ ಪಡಿಸುವ ಧೋರಣವನ್ನು ಹಿಂದುಸ್ಥಾನ ಸರಕಾರವು ಇಟ್ಟುಕೊಂಡಿಲ್ಲೆಂದು ಮತ್ತೆ ಸಾರಲಾಗಿದೆ. ದಕ್ಷಿಣದಲ್ಲಿ ಸೊಂಡೂರ, ಮುಂಬಯಿ ಪ್ರಾಂತದಲ್ಲಿ ಬನಾರಸ ಮತ್ತು ರಾಮಪೂರ ತ್ರಿಪುರಾ ಖಾಸೀ ಗುಡ್ಡದ ಸಂಸ್ಥಾನಗಳು ಕುಚಬಿಹಾರ ಸ್ವತಂತ್ರ ಘಟಕಗಳಾಗಿ ಉಳಿಯಲಾರದಷ್ಟು ಚಿಕ್ಕವಾಗಿರುವದರಿಂದ ಅವುಗಳ ವಿಲೀನೀಕರಣ ಅಥವಾ ಸಮೀಕರಣದವ್ಯವಸ್ಥೆ ಮಾಡಲಾಗುವದು. ಸಂಸ್ಥಾನ ಶಾಖೆಯವರು ಒಂದು ವರುಷದಲ್ಲಿ ರಕ್ತರಹಿತ ಕ್ರಾಂತಿಯಿಂದ ಸಾಧಿಸಿದ ಕಾರ್ಯವು ಹಿಂದುಸ್ತಾನದ ಭಾವೀ ಇತಿಹಾಸದಲ್ಲಿ ಚಿರಸ್ಮರಣೀಯವಾಗಿ ಉಳಿವುದೆಂಬಲ್ಲಿ ಸಂದೇಹವಿಲ್ಲ.

### ೪. ಬರಗಾಲದಲ್ಲಿ ಹೆರಿಗೆಯ ಆಸ್ಪತ್ರೆ

ಕ್ಷಾಮಪೀಡಿತ ಪ್ರದೇಶದಲ್ಲಿ ಕಷ್ಟಕ್ಕೊಳಗಾದ ಗರ್ಭಿಣಿ ಸ್ತ್ರೀಯರ ಹೆರಿಗೆಗಾಗಿ ಕಸ್ತೂರಬಾ ಹೆರಿಗೆ ಆಸ್ಪತ್ರೆಯು ಮಾಡಿದ ಅತ್ಯುಪಯುಕ್ತ ಕಾರ್ಯದ ಉದಾಹರಣೆಯೊಂದು ಇಲ್ಲಿದೆ. ಇದನ್ನೆಲ್ಲ ಕಸ್ತೂರಬಾ ಸ್ಮಾರಕ ನಿಧಿಯ ಸೇವಿಕೆಯರೇ ಮಾಡಿದ್ದಾರೆ. ೧೯೪೬ರಲ್ಲಿ ಮೈಸೂರ ಉತ್ತರಕ್ಕಿರುವ ಚಿತ್ರದುರ್ಗ ಜಿಲ್ಹೆಯು ಕ್ಷಾಮ ಪೀಡಿತವಾಗಿತ್ತು. ಆಗ ಸೇವಿಕೆಯರು ಶ್ರೀಮತಿ ಯಶೋಧರಮ್ಮ ದಾಸಪ್ಪ ಅವರ ನೇತೃತ್ವದಲ್ಲಿ ಶಿಕ್ಷಣ ಹೊಂದುತ್ತಿದ್ದರು. ಅವರಲ್ಲಿ ರಚನಾತ್ಮಕ ಕಾರ್ಯದಲ್ಲಿ ನುರಿತ ಶ್ರೀಮತಿ ಸಿದ್ದಮ್ಮ ಎಂಬವರೂ ಒಬ್ಬರು. ಅವರು ೧೯೪೬ರ ಜನೆವರಿ ತಿಂಗಳಲ್ಲಿ ಮದ್ರಾಸದೊಳಗೆ ಗಾಂಧೀಜಿಯನ್ನು ಕಂಡರು. ಆಗ ಗಾಂಧೀಜಿ ಮದ್ರಾಸದಲ್ಲಿ ಹಿಂದಿ ಪ್ರಚಾರದ ರಜತ ಮಹೋತ್ಸವಕ್ಕಾಗಿ ಸಂಚರಿಸುತ್ತಿದ್ದರು. ಕೆಳಗೆ ನಾನು ಶ್ರೀ. ಸಿದ್ದಮ್ಮನವರೇ ಕಳುಹಿದ ಕಾರ್ಯದ ವರದಿಯನ್ನು ಉದ್ಧರಿಸುತ್ತೇನೆ.

“ಚಿತ್ರದುರ್ಗ ಜಿಲ್ಹೆಯು ಈಗ ಕ್ಷಾಮಪೀಡಿತವಾಗಿದ್ದು ಸ್ತ್ರೀಯರ ಮತ್ತು ಚಿಕ್ಕ ಮಕ್ಕಳ ಯೋಗಕ್ಷೇಮದ ಕಾರ್ಯವನ್ನು ವಹಿಸಿಕೊಂಡು ಸಾಧ್ಯವಿದ್ದಷ್ಟು ನೀನು ಈ ಬಗ್ಗೆ ದುಡಿಯಬೇಕೆಂದು ನನ್ನ ಇಚ್ಛೆ ಎಂಬುದಾಗಿ ಗಾಂಧೀಜಿ ಹೇಳಿದರು.

“ಬಾಪು ಅವರ ಮಾತೆಂದರೆ ನನಗೆ ವೇದವಾಕ್ಯ. ನಾನು ಕೂಡಲೆ ಕ್ಷಾಮ ಪರಿಹಾರ ಮಂಡಲದವರ ನೆರವು ಕೋರಿದೆ. ಮಂಡಲದ ಸದಸ್ಯರು ನನಗೆ ಎಲ್ಲ ಬಗೆಯ ಸಹಾಯವನ್ನೂ ಅನುಕೂಲತೆಯನ್ನೂ ಒದಗಿಸಿದರು. ಇದರ ಫಲವಾಗಿ ಚಿತ್ರದುರ್ಗದಲ್ಲಿ ೩-೬-೪೬ಕ್ಕೆ “ಮಾತೃ ಮಂದಿರ”ವು ಸ್ಥಾಪಿತವಾಯ್ತು. ಕ್ಷಾಮ ಪರಿಹಾರ ಮಂಡಳದ ಅಧ್ಯಕ್ಷರಾದ ಶ್ರೀ. ಎಲ್. ಎಸ್. ವೆಂಕಾಜಿರಾಯರು, ಕ್ಷಾಮ ತೊಲಗುವವರೆಗೂ ತಾವೇ “ಮಾತೃಮಂದಿರ”ದ ಬಸಿರೆಯರ ಪೋಷಣ ಭಾರವನ್ನು ಹೊರುವದಾಗಿ ಹೇಳಿದರು. ಹಾಗೆ ಅವರು ೭ ತಿಂಗಳವರೆಗೆ ಈ ಹೊಣೆ ಹೊತ್ತರು.

“ಆ ಮೇಲೆ ಈ ಸಂಸ್ಥೆಗೆ ‘ಕಸ್ತೂರಬಾ ಸ್ಮಾರಕ ಮಾತೃ ಮಂದಿರ’ ಎಂಬುದಾಗಿ ನಾಮಕರಣ ಮಾಡಲಾಯ್ತು. ಈ ಬಗೆಯ ಕಾರ್ಯವು ಹಳ್ಳಿಗಳಲ್ಲಿ ಮಾತ್ರ ಜರಗಬೇಕೆಂದು ಮಹಾತ್ಮರ ತೀವ್ರಾಪೇಕ್ಷೆ. ಇದಕ್ಕನುಗುಣವಾಗಿ ಮಂದಿರವು ೧೪-೪-೪೮ಕ್ಕೆ ಗಣನಾಯಕನ ಹಳ್ಳಿಗೆ ಸ್ಥಳಾಂತರಿಸಲ್ಪಟ್ಟಿತು.

“ಆ ಹಳ್ಳಿಯ ಜನಸಂಖ್ಯೆ ೭೦೦. ಅಲ್ಲಿ ಒಂದೆರಡು ಶ್ರೀಮಂತ ಮನೆತನಗಳುಂಟು. ಉಳಿದವರೆಲ್ಲ ಕಡು ಬಡವರೇ. ಅಲ್ಲಿ ರೆಡ್ಡಿ ಜನಗಳೇ ಹೆಚ್ಚು. ಅವರೆಲ್ಲ ಒಕ್ಕಲತನ ಮಾಡಿಕೊಂಡೇ ಇರುತ್ತಾರೆ. ಪತ್ತಾರರು, ಒಕ್ಕಲಿಗರು, ಹರಿಜನರು, ಇನ್ನುಳಿದವರೂ ಆ ಹಳ್ಳಿಯಲ್ಲಿರುತ್ತಾರೆ. ಆ ಹಳ್ಳಿಯು ಹಿರಿಯೂರಿನಿಂದ ೨೨ ಮೈಲು ದೂರದಲ್ಲಿದೆ. ಗಣನಾಯಕನ ಹಳ್ಳಿಯವರಿಗೆ ವೈದ್ಯಕೀಯ ಚಿಕಿತ್ಸೆ ಬೇಕಾದರೆ ಹಿರಿಯೂರಿಗೇ ಹೋಗಬೇಕು. ಇದು ಮಲೇರಿಯಾ ಪೀಡಿತ ಪ್ರದೇಶ. ಇಲ್ಲಿ ಎಲ್ಲರಿಗೂ ಮಲೇರಿಯಾ ಬಾಧೆ ಎಲ್ಲರಿಗೂ ಹೊಟ್ಟೆಯಲ್ಲಿ ನೀರುಬಿಲ್ಲೆ. ಜನರು ತ್ವಚರೋಗಗಳಿಂದೂ ಬಳಲುತ್ತಾರೆ.

“ಹಳ್ಳಿಗರ ಈ ದುರ್ದೆಶೆಯನ್ನು ನೋಡಲಾರದೆ ಅವರ ನೆಮ್ಮದಿಗಾಗಿ ಶ್ರೀಮತಿ ಸಿ. ಟಿ. ಗಂಗಮ್ಮನವರು ಈ ಸಂಸ್ಥೆಯ ಕಟ್ಟಡಕ್ಕಾಗಿ ೬ ಸಾವಿರ ರೂಪಾಯಿಗಳ ಉದಾರ ದಾನ ಸಲ್ಲಿಸಿದ್ದಲ್ಲದೆ ತಾತ್ಪೂರ್ತಿಕವಾಗಿ ತಮ್ಮ ಮನೆಯನ್ನೆ ಮಂದಿರದ ಉಪಯೋಗಕ್ಕೆ ಒಪ್ಪಿಸಿದರು.

“ಹೆಚ್ಚಿನ ವಿವರಗಳನ್ನು ಕೆಳಗಿನ ಅಂಕಿಗಳಿಂದ ತಿಳಿಯಬಹುದು.

“೩-೬-೪೬ ರಿಂದ ೩೧-೭-೪೭ ರ ವರೆಗೆ ೮೬ ಸ್ತ್ರೀಯರಿಗೆ ಪ್ರವೇಶದೊರೆತು ೭೪ ಸ್ತ್ರೀಯರಿಗೆ ಸುಖ ಪ್ರಸವವಾಯಿತು. ಇಬ್ಬರಿಗೆ ಮೃತಶಿರು ಜನನವಾಯ್ತು. ೧೦ ಜನ ಸ್ತ್ರೀಯರು ಅಪ್ಪಣೆಯಿಲ್ಲದೆ ಸಂಸ್ಥೆಯನ್ನು ಬಿಟ್ಟು ಹೋದರು.

“೧-೮-೪೭ ರಿಂದ ೧೪-೪-೪೮ ರ ವರೆಗೆ ೯೭ ಸ್ತ್ರೀಯರಿಗೆ ಪ್ರವೇಶ ದೊರೆತು ೮೩ ಸುಖ ಪ್ರಸವವಾದವು. ಇಬ್ಬರಿಗೆ ಮೃತ ಶಿಸುಹುಟ್ಟಿದವು. ೧೨ಜನ ಸ್ತ್ರೀಯರು ಅಪ್ಪಣೆಯಿಲ್ಲದೆ ಸಂಸ್ಥೆಯನ್ನು ಬಿಟ್ಟು ಹೋದರು.

“೧೪-೪-೪೮ ರಿಂದ ೨೨-೪-೪೮ ರ ವರೆಗೆ ಅಂದರೆ ೮ ದಿನಗಳಲ್ಲಿ ೧೦ ಸ್ತ್ರೀಯರಿಗೆ ಪ್ರವೇಶಕೊಡಲಾಯ್ತು. ೬ ಸುಖಪ್ರಸವವಾದವು.

“ಬಸಿರೆಯರನ್ನು ಹೆರಿಗೆಯ ಮೊದಲು ಒಂದು ತಿಂಗಳ ಬರಮಾಡಿಕೊಂಡು ಹೆರಿಗೆಯಾದ ಮೇಲೆ ಒಂದು ತಿಂಗಳ ಇಟ್ಟುಕೊಳ್ಳಲಾಗುತ್ತದೆ. ಇದರ ಉದ್ದೇಶವೆಂದರೆ ಅವರಿಗೆ ಸಾಧ್ಯವಿದ್ದಷ್ಟು ಹೆಚ್ಚು ಕಾಲ ಆರೋಗ್ಯದ ಪರಿಕರ ಒದಗಿಸಿ ಸಾಧ್ಯವಿದ್ದಷ್ಟು ಹೆಚ್ಚು ಉಪಯುಕ್ತ ವಿಷಯಗಳ ತಿಳುವಳಿಕೆ ಕೊಡುವದೇ ಆಗಿದೆ. ಈ ಎರಡು ತಿಂಗಳದ ಮಂದಿರವಾಸದಿಂದ ಅವರಿಗೆ ಅತ್ಯಾವಶ್ಯಕವಾಗಿದ್ದ ವಿಶ್ರಾಂತಿ ದೊರಕುವದು, ಮನೆಯಲ್ಲಿದ್ದರೆ ಈ ವಿಶ್ರಾಂತಿ ಅವರಿಗೆ ಸಾಧ್ಯವೇಇಲ್ಲ.”

### ೫ ಪ್ರಗತಿಪರ ಗ್ರಾಮ

ದಕ್ಷಿಣ ಕನ್ನಡದ ಕಾಸರಗೋಡ ಹತ್ತರ ವೈಪಾಡಿ ಎಂಬ ಏರಿಕೆಯಲ್ಲಿರುವ ಸುಂದರವಾದ ಹಳ್ಳಿಯೊಂದಿದೆ. ಜನಸಂಖ್ಯೆ ೯೪೦. ಎಲ್ಲರೂ ಒಕ್ಕಲತನವನ್ನು ಅವಲಂಬಿಸಿದವರೇ. ವರ್ಷಕ್ಕೆ ೪ ಸಲ ಬೆಳೆ ಎತ್ತುವಷ್ಟು ಮಳೆಯೂ ಅಲ್ಲಿ ಬೀಳುತ್ತದೆ. ಅಲ್ಲಿಯ ಜನ ಮಲಯಾಳಿ ಮಾತನ್ನಾಡುತ್ತಾರೆ. ಆದರೆ ಅಲ್ಲಿ ಕಸ್ತೂರಬಾ ಕೇಂದ್ರದ ಸಂಘಟಕರಾದ ಶ್ರೀಮತಿ ಸುನಂದಾ ಕಾಮತ ಇವರ ಭಾಷೆ ಕನ್ನಡ. ಇವರು ಮಕ್ಕಳಕೂಟವನ್ನೂ ಹಿಂದೀ ಕನ್ನಡ ವರ್ಗಗಳನ್ನೂ ನಡೆಸುತ್ತಾರೆ. ಪ್ರತಿ ವರ್ಗದಲ್ಲಿ ಅನುಕ್ರಮವಾಗಿ ೧೨, ೩೬ ಜನರಿದ್ದು ಅವರಲ್ಲಿ ೧೬ ಸ್ತ್ರೀಯರಿದ್ದಾರೆ. ಅವರು ದಿನಾಲು ಸಾಯಂಪ್ರಾರ್ಥನೆಯನ್ನೂ ಜರಗಿಸುತ್ತಾರೆ. ಇದಕ್ಕೆ ೨೦ ಜನ ಬರುತ್ತಾರೆ. ನೂಲುವ ವರ್ಗವೂ ಏರ್ಪಟ್ಟಿದೆ. ಪ್ರಗತಿ ನಿಧಾನವಾಗಿಸಾಗಿದೆ. ವೈದ್ಯಕೀಯ ಶಾಖೆಯ ಪ್ರಯೋಜನವನ್ನು ೭೭ ಜನರು ಪಡೆದಿದ್ದು ಅದೂ ಸಮಾಧಾನಕರವಾಗಿ ಸಾಗಿದೆ.

ಮನೆಗಳು ಸಾಕಷ್ಟು ಚೊಕ್ಕಟವಾಗಿವೆ. ಆದರೆ ಜನಗಳಲ್ಲಿ ಜಾತೀಯ ಭಾವವೂ ಅಂಧ ಶ್ರದ್ಧೆಯೂ ತುಂಬ ಉಂಟು. ಆ ಹಳ್ಳಿಯಲ್ಲಿ ಒಂದು ಪ್ರಾಥಮಿಕ ಶಾಲೆಯೂ ಉಂಟು.

ಮೇ ೧೯೪೮ — ಎ. ವ್ಹಿ. ಥಕ್ಕರ.

## ಛಲಗ್ರಸ್ತ ಜಾತೀಯ ಪ್ರಾತಿನಿಧ್ಯ

ಹರಿಜನರನ್ನುಳಿದು ಉಳಿದ ಹಿಂದು ಸಮಾಜದವರಲ್ಲಿ ಜಾತೀಯತೆಯನ್ನು ಗಮನಿಸಿ ನೌಕರಿ ಮೊದಲಾದ ವಿಷಯಗಳಲ್ಲಿ ಪ್ರಾತಿನಿಧ್ಯ ಕೊಡಕೂಡದೆಂದು ಹಿಂದುಸ್ತಾನ ಸರಕಾರದ ಧೋರಣವಿದೆ. ಆದರೆ ಮದ್ರಾಸ ಸರಕಾರವು ಮಾತ್ರ ಇದನ್ನು ಛಲಪೂರ್ವಕ ಉಲ್ಲಂಘಿಸಿದಂತೆ ಕಾಣುತ್ತದೆ. ತನ್ನ ಪ್ರಾಂತದ ವೈದ್ಯಕೀಯ ಮತ್ತು ಎಂಜನಿಯರಿಂಗ ಕಾಲೇಜುಗಳಲ್ಲಿ ಪ್ರವೇಶ ದೊರಕಿಸಲು ಕೂಡ ಮದ್ರಾಸ ಸರಕಾರವು ಜಾತ್ಯನುಗುಣ ನಿರ್ಬಂಧ ಹಾಕಿದ ಹಾಗೆ ತಿಳಿಯುತ್ತದೆ. ೬ ಬ್ರಾಹ್ಮಣೇತರ ಹಿಂದುಗಳು, ೨ ಬ್ರಾಹ್ಮಣರು, ೨ ಹರಿಜನರು, ೧ ಇಂಡಿಯನ್ ಕ್ರಿಶ್ಚಿಯನ್, ೧. ಮುಸಲ್ಮಾನ, ಮತ್ತು ೨ ಹಿಂದುಳಿದ ವರ್ಗದ ಹಿಂದುಗಳು ಹೀಗೆ ಪ್ರಾತಿನಿಧ್ಯ ಕೊಡಲಾಗಿದೆ.

ಶಿಕ್ಷಣದ ದೃಷ್ಟಿಯಿಂದ ಹಿಂದುಳಿದ ವರ್ಗದವರು ಮುಂದರಿದವರ ಸರಿಸಮಾನ ಬರತಕ್ಕದ್ದು ಯುಕ್ತವೂ ಅಗತ್ಯವೂ ಎಂಬುದು ನನಗೆ ತಿಳಿಯುತ್ತದೆ. ಆದರೆ ಅದು ಜಾತ್ಯನುಗುಣ ಪ್ರಾತಿನಿಧ್ಯದ ತತ್ವದಂತೆ ಆಗಕೂಡದು.

ವರ್ಧಾ — ಕಿಶೋರಲಾಲ ಮಶ್ರೂವಾಲಾ

೧—೨—೪೮

## “ಪ್ರಗತಿ ರಥವನ್ನು ಹಿಂದೆ ಜಗ್ಗುವದು”

(ಜೂನ ೮ ಪತ್ರಿಕೆಗಳಲ್ಲಿ ರಸಾಯನಿಕ ಗೊಬ್ಬರಗಳ ಸಂಬಂಧದಲ್ಲಿ ಈ ಕೆಳಗಿನ ಸುದ್ದಿ ಬಂದಿತ್ತು:.

“ಅಂತರ್‌ರಾಷ್ಟ್ರೀಯ ರೋಟರಿ ಪರಿಷತ್ತಿಗಾಗಿ ಕ್ವಿಬೇಕಿಗೆ ಹೋಗಿದ್ದ ಬನಾರಸ ಹಿಂದೂ ವಿಶ್ವವಿದ್ಯಾಲಯದ ಉಪಕುಲಪತಿ ಡಾ. ಅಮರನಾಥ ಝಾ ಅವರು ಪ್ರೊ. ಈನ್‌ಸ್ಟೀನರನ್ನು ಕಂಡಾಗ, ಅವರು ಭಾರತದಲ್ಲಿ ಆಧುನಿಕ ಕೃಷಿಪದ್ಧತಿಗಳನ್ನು ಉಪಯೋಗಿಸದಂತೆ ಎಚ್ಚರಿಕೆ ಕೊಟ್ಟರು. ಭಾರೀ ಟ್ರಾಕ್ಟರುಗಳನ್ನೂ ಯಂತ್ರಗಳನ್ನೂ ಉಪಯೋಗಿಸಿ ಸ್ವಲ್ಪ ಕಾಲದ ವರೆಗೆ ಉತ್ಪಾದನೆಯನ್ನು ಹೆಚ್ಚಿಸುವದು ಸಾಧ್ಯವಿದ್ದರೂ ಅದರ ಕೊನೆಯ ಪರಿಣಾಮವಾಗಿ ಭೂಮಿಯ ಸಾರವೆಲ್ಲ ಸಂಪೂರ್ಣ ನಾಶವಾಗಿ ಬಿಡಬಹುದು. ದೇಶಕ್ಕೆ ಇದರಿಂದ ಅಪಾರ ಹಾನಿಯಾದೀತು ಎಂದು ಪ್ರೊ. ಈನ್‌ಸ್ಟೀನರು ಹೇಳಿದರು” ಸಂ.)

ಪ್ರೊ. ಈನ್‌ಸ್ಟೀನರಿಗಿಂತಲೂ ಮೊದಲು ಅನೇಕಾನೇಕ ತಜ್ಞರು ಪಾಶ್ಚಿಮಾತ್ಯ ರೈತನಿಗೆ ಈ ದೂರದೃಷ್ಟಿಯಿಲ್ಲದ ಸಾಧನಗಳನ್ನು ಉಪಯೋಗಿಸದಂತೆ ಎಚ್ಚರಿಕೆ ಕೊಟ್ಟದ್ದುಂಟು. ನಮ್ಮ ದೇಶ ಉಳಿದವುಗಳಿಗಿಂತ ಯಾವಾಗಲೂ ಒಂದು ಶತಮಾನ ಹಿಂದೆ. ಪಾಶ್ಚಾತ್ಯ ವೈಜ್ಞಾನಿಕರು ತಳ್ಳಿ ಹಾಕಿದ್ದನ್ನು ನಮ್ಮ ತಜ್ಞರು ಪ್ರಗತಿಯ ಪರಮ ಲಕ್ಷಣವೆಂದು ಸ್ವೀಕರಿಸುತ್ತಾರೆ! ನಮ್ಮ ವೈಜ್ಞಾನಿಕರು ತಮ್ಮೀ ಹಳಸಿದ ವಿಚಾರಗಳನ್ನು ತಮ್ಮ ಪ್ರಯೋಗಶಾಲೆಗಳಿಗೇ ಸೀಮಿತಗೊಳಿಸಿದ್ದರೆ ಹಾನಿಯಿದ್ದಿಲ್ಲ. ಆದರೆ ಸ್ವಾರ್ಥಸಾಧಕರು ಇದನ್ನು ತಮ್ಮ ಪ್ರಚಾರಕ್ಕಾಗಿ ಉಪಯೋಗಿಸಿಕೊಂಡು, ಗೊಬ್ಬರದ ಕಾರಖಾನೆಗಳನ್ನು ತೆರೆಯುವ ಸಲುವಾಗಿ ಕೋಟ್ಯಂತರ ರೂಪಾಯಿ ಸಾರ್ವಜನಿಕ ದ್ರವ್ಯವನ್ನು ದುಂದು ಮಾಡುವಂತೆ ನಮ್ಮ ಸರಕಾರದ ಮನವೊಲಿಸಿದ್ದಾರೆ.

ಈಗಾಗಲೆ ನಮ್ಮಲ್ಲಿ ಕೃಷಿ ಭೂಮಿಯ ಮೇಲಿರುವ ಒತ್ತಡ ಬಹಳವಾಗಿ ಜನರಿಗೆ ಸಾಕಷ್ಟು ಆಹಾರ ಸಿಗದಾಗಿದೆ. ಭೂಮಿಯ ವಿಚಾರಪೂರ್ವಕ ಉಪಯೋಗ ಮತ್ತು ಆದರ ಸಂಗಡ ಉರುವಲಿನ ಪೂರೈಕೆಗೆ ಧಾರಾಳವಾದ ಬೇರೆ ಉಪಾಯಗಳನ್ನು ಮಾಡಿ ಹಟ್ಟಿಯ ಗೊಬ್ಬರ ಹೊಲಕ್ಕೇ ಹೋಗುವಂತೆಮಾಡುವದು— ಇವೀಗ ನಮಗೆ ಬೇಕಾಗಿವೆ. ಬದಲಿಗೆ ನಾವು ಸಾಧಾರಣ ಸಾರವತ್ತಾದ ಭೂಮಿಯನ್ನು ಬೇಗನೆ ಲಾಭ ಪಡೆಯುವ ಲೋಭದಿಂದ ಮರುಭೂಮಿಯಾಗಿ ಮಾರ್ಪಡಿಸುವದರಲ್ಲಿದ್ದೇವೆ. ಸ್ವಲ್ಪ ಸಮಯದ ವರೆಗೆ ರಸಾಯನಿಕ ಗೊಬ್ಬರಗಳಿಂದ ಭೂಮಿಯ ಹುಟ್ಟುವಳಿ ಹೆಚ್ಚುವದರಲ್ಲಿ ಸಂದೇಹವಿಲ್ಲ. ಆದರೆ ಅದು ಕುಡುಕನ ಉತ್ಸಾಹದಂತೆ ಬಹಳ ಬೇಗನೆ ಮಾಯವಾಗಿ ಮೊದಲಿನ ಅವಸ್ಥೆಗಿಂತಲೂ ಎರಡನೆಯದು ದುಸ್ತರವಾಗುವದು. ಚಿನ್ನದ ತತ್ತಿ ಇಡುವ ಕೋಳಿಯನ್ನು ಕೊಲ್ಲುವಂಥ ಮೂರ್ಖರಾಗೋಣವೆ ?

ಇದು ಪ್ರೊ. ಈನಸ್ಟೀನರ ವೈಯಕ್ತಿಕ ವಿಚಾರವಾಗಿದ್ದರೆ ಅದನ್ನು ಹಗುರಾಗಿ ತಳ್ಳಿಹಾಕಿಬಿಡಬಹುದಿತ್ತು. ಆದರೆ ಅಮೇರಿಕೆಯಲ್ಲಿಯೂ ಆಸ್ಟ್ರೇಲಿಯಾದಲ್ಲಿಯೂ ರಾಸಾಯನಿಕ ಗೊಬ್ಬರಗಳನ್ನೂ ಯಂತ್ರಗಳನ್ನೂ ಅತ್ಯಂತ ಅನುಕೂಲ ಪರಿಸ್ಥಿತಿಯಲ್ಲಿ ಉಪಯೋಗಿಸಿದಬಳಿಕ ಈಅಭಿಪ್ರಾಯವುಂಟಾಗಿದೆ.

ಆಸ್ಟ್ರೇಲಿಯನ್ ಅರ್ಥಶಾಸ್ತ್ರಜ್ಞರಾದ ಕಾಲಿನ್ ಗ್ರಾಂಟ್ ಕ್ಲಾರ್ಕರ ಸಲಹೆಯನ್ನು ನಮ್ಮ ಸರಕಾರ ಕೇಳಿದಾಗ ಹಿಂದುಸ್ತಾನವನ್ನು ಮನೆಕೈಗಾರಿಕೆಯ ಪದ್ಧತಿಯಲ್ಲಿ ಬೆಳೆಸಿಕೊಳ್ಳುವದೊಳಿತೆಂದೂ ಕಾರಖಾನೆಗಳನ್ನು ಅನಿವಾರ್ಯ ಉಪದ್ರವಗಳೆಂದು ಬಗೆಯಬೇಕೆಂದೂ ಅವರು ಸೂಚಿಸಿದ ಸಂಗತಿಯನ್ನು ಓದುಗರ ನೆನಪಿಗೆ ತರಬಯಸುವೆವು. ಈ ಮನುಷ್ಯರು ಗಾಂಧೀ—ಅನುಯಾಯಿಗಳೆಂದೂ ಅವರು ಪ್ರಗತಿಯ ಚಕ್ರವನ್ನು ಹಿಂದೆ ದೂಡ ಬಯಸುವರೆಂದೂ ಯಾರೂ ಹೇಳಲಾರರು. ಅನುಭವಜನ್ಯವಾದ ಈ ವಿವೇಕೋಪದೇಶವನ್ನು ನೆಚ್ಚೋಣವೇ ಅಥವಾ ವಿನಾಶಪಥವನ್ನೆ ಅನುಸರಿಸೋಣವೆ?

ಪಾಶ್ಚಿಮಾತ್ಯರ ಪ್ರಭಾವ ನಮ್ಮ ಔದ್ಯೋಗಿಕ ಕಟ್ಟಡವನ್ನು ಕೆಡಹಿತು. ನಮ್ಮ ಹೊಲಗಳನ್ನು ಮರುಭೂಮಿಗಳಾಗಿ ಮಾಡುವ ಕೆಲಸ ನಮ್ಮ ರಾಷ್ಟ್ರೀಯ ಸರಕಾರದ ಪಾಲಿಗೆ ಬಂದಿದೆಯೆ ? ದೇವರು ಅಂಥ ಪ್ರಸಂಗವನ್ನು ತಾರದಿರಲಿ! — ಜೆ. ಸಿ. ಕುಮಾರಪ್ಪ

## ರೂಪರಂಗ

## ಅ. ಭಾ. ಲಲಿತಕಲಾ ಪರಿಷತ್ತು

ಅ. ಭಾ. ಲಲಿತಕಲಾ ಸಂಘದ ೩ ನೆಯ ವಾರ್ಷಿಕ ಸಭೆಯು ಮುಂಬಯಿಯ ಮುಖ್ಯ ಮಂತ್ರಿಗಳಾದ ಬಿ. ಜಿ. ಖೇರರ ಉದ್ಘಾಟನೆಯಿಂದ ಜರುಗಿ ಕೊನೆಗಂಡಿತು. ಸುಮಾರು ೫೦ ಪ್ರತಿನಿಧಿಗಳು ಭಾರತದ ನಾನಾ ಕಡೆಗಳಿಂದ ಆಗಮಿಸಿದ್ದರು. ಸ್ವೀಕೃತವಾದ ಗೊತ್ತುವಳಿಗಳಲ್ಲಿ ಕೆಳಗಿನವು ಮುಖ್ಯವಾದವು:–

೧ ಪರಿಷತ್ತಿನ ಗೊತ್ತುವಳಿಗಳನ್ನು ಅಮಲಿನಲ್ಲಿ ತರಲು ನೆರವನ್ನು ಪಡೆಯಲು ಒಂದು ಪ್ರತಿನಿಧಿ ಮಂಡಲವು ಹಿಂದೀ ಪ್ರಧಾನ ಮತ್ತು ವಿದ್ಯಾ ಮಂತ್ರಿಗಳೆಡೆಗೆ ಹೋಗತಕ್ಕದ್ದು.

೨ ಆಯಾತದ ಮೇಲಿನ ನಿರ್ಬಂಧದಿಂದ ಕಲೆಗಾರರಿಗೆ ಅಗತ್ಯ ಸಾಧನಗಳು ಸಿಗದಾಗಿದ್ದು, ಅವುಗಳನ್ನು ಸುಲಭವಾಗಿ ಪಡೆಯಲು ನೆರವೀಯಬೇಕೆಂದು ವಾಣಿಜ್ಯ ಶಾಖೆಯನ್ನು ಕೇಳಿಕೊಳ್ಳತಕ್ಕದ್ದು.

೩ ಇಂದಿನ ಧಾರಣೆವಾಸಿಗನುಗುಣವಾಗಿ ಕಲಾ ಶಾಲೆಗಳಲ್ಲಿಯ ಕೆಲಸಗಾರರಿಗೆ ಸಂಬಳವನ್ನು ಹೆಚ್ಚಿಸಬೇಕು.

೪ ರಾಷ್ಟ್ರಪಿತ ಗಾಂಧಿಯ ಗೌರವಕ್ಕೆ ತಕ್ಕ ಸ್ಮಾರಕವನ್ನು ನಿರ್ಮಿಸಲು ಸಂಬಂಧಪಟ್ಟ ಅಧಿಕಾರಿಗಳಿಗೆ ಸಲಹೆಕೊಡಲು ಸಂಘದ ಕಾರ್ಯವಾಹಕ ಸಮಿತಿಯು ತಕ್ಕ ವ್ಯವಸ್ಥೆಯನ್ನು ಮಾಡತಕ್ಕದ್ದು.

೫ ಸ್ಮಾರಕಗಳು, ವರ್ಣಚಿತ್ರ ಸಂಗ್ರಹ, ಕಲಾವಸ್ತುಗಳು ಇವು ದೇಶದ ಯಾವಕಡೆಯಿದ್ದರೂ ಅವೆಲ್ಲವನ್ನು ಪರಿಶೀಲಿಸಿ ಅನುಕ್ರಮಣಿಕೆಯನ್ನು ತಯಾರಿಸಿ ಕೋಶವೊಂದನ್ನು ರಚಿಸಲು ದಿಲ್ಲಿ ಸರಕಾರವನ್ನು ಕೇಳಿಕೊಳ್ಳತಕ್ಕದ್ದು.

ಹೊಸ ಚುನಾವಣೆಯಲ್ಲಿ ಶ್ರೀ ಜಿ. ವೆಂಕಟಾಚಲರನ್ನು ಅಧ್ಯಕ್ಷರನ್ನಾಗಿಯೂ ಶ್ರೀ ಸತೋಸ್ಲೇವ್‌ರೋರಿಕ್, ಡಾ. ಸ್ಟೆಲ್ಲಾ ಕ್ರಾಮ್‌ರಿಸ್ಕ್, ಲೇಡಿ ರಾನಿ ಮುಖರ್ಜಿ, ಶ್ರೀ ಕಾರಲ್ ಖಂಡಲಿವಾಲ ಮತ್ತು ಶ್ರೀ ರವಿಶಂಕರ ರಾವಲರು ಇವರನ್ನು ಉಪಾಧ್ಯಕ್ಷರನ್ನಾಗಿಯೂ ಆರಿಸಲಾಯಿತು. ೨೦ ಜನರ ಒಂದು ಕಾರ್ಯನಿರ್ವಾಹಕ ಸಮಿತಿಯೂ ನಿಯಮಿಸಲ್ಪಟ್ಟಿತು.

ಹಿಂದೀ ಸರಕಾರವು ಸ್ಥಾಪಿಸಲಿರುವ ರಾಷ್ಟ್ರೀಯ ಸಾಂಸ್ಕೃತಿಕ ವಿಶ್ವಸ್ತ ಸಮಿತಿಗೆ ಈ ಸಂಘವು ಹಾದಿ ಹಾಕಿಕೊಟ್ಟದ್ದು ಯೋಗ್ಯವಾಗಿದೆಯೆಂದೂ ಈ ಪರಿಷತ್ತಿನಲ್ಲಿ ವಿವಿಧ ಕಲೆಗಾರರು ತೋರಿದ ಉತ್ಸಾಹ ಶ್ಲಾಘ್ಯವಾಗಿದೆಯೆಂದೂ ಅಧ್ಯಕ್ಷರಾದ ವೆಂಕಟಾಚಲರು ಸಮಾರೋಪ ಮಾಡಿದರು.

"ಲಲಿತ ಕಲೆ"ಗಳ ಪರಿಷತ್ತೆಂದು ಹೇಳಿ ಅಲ್ಲಿ ಕೇವಲ ಚಿತ್ರಕಲೆ, ಮಂದಿರ ನಿರ್ಮಿತಿ, ಮೂರ್ತಿವಿದ್ಯೆ, ಮುಂತಾದವುಗಳಿಗೆ ಪ್ರಾಧಾನ್ಯವಿತ್ತು, ಸಾಹಿತ್ಯ ಸಂಗೀತಾದಿಗಳನ್ನು ಹೊರಗೆ ಹಾಕಿದ್ದು ಮಾನವ ಸೌಂದರ್ಯ ಸ್ಪರ್ಧೆಯಲ್ಲಿ ಸ್ತ್ರೀಗೆ ಮಾತ್ರ ಸ್ಥಾನ ಕೊಟ್ಟಂತಾಗುತ್ತದೆ; ಅಥವಾ ಸಂಗೀತ ಕಚೇರಿಯೆಂದೊಡನೆ ಭಕ್ತಿಗೀತಗಳನ್ನು ಮಾತ್ರ ಹಾಡಿದಂತಾಗುತ್ತದೆ ಎಂಬುದನ್ನು ಕಲಾಸಂಘದವರು ಮನನ ಮಾಡಿದಂತಿಲ್ಲ. ೨ ನೆಯದಾಗಿ ಮನಃಶಾಸ್ತ್ರ ಮತ್ತು ಸಮಾಜ ನೀತಿಶಾಸ್ತ್ರಗಳ ದೃಷ್ಟಿಯಿಂದ ಭಾರತೀಯ ಕಲೆಯಲ್ಲಿ ಸಾಂಸ್ಕೃತಿಕ ಉತ್ಕರ್ಷ ಅಪಕರ್ಷಗಳಿಗೆ ಕಾರಣವಾದ ಪ್ರವೃತ್ತಿಗಳಾವುವೆಂಬದನ್ನು ವಿವರವಾಗಿ ವಿಮರ್ಶಿಸುವ ಗೊಡವೆಗೆ ಯಾರೂ ಹೋದಂತಿಲ್ಲ. ಪ್ರಕೃತಿಯಲ್ಲಿಯ ಮುಖ್ಯಾಂಶಗಳನ್ನು ಆಯ್ದು ಅನುಸರಿಸಲು ಹೊರಟ ಕಲೆ ದೇಶ ವಿದೇಶಗಳಲ್ಲಿ ಈಗ ವಿಕೃತಿ ಸ್ಥಾನಕ್ಕೆ ಮುಟ್ಟಿದ್ದನ್ನು ಖಂಡಿಸುವ ಬುದ್ಧಿಯನ್ನು ಎಲ್ಲೂ ವ್ಯಕ್ತಮಾಡಿಲ್ಲ. ಕೊನೆಯದಾಗಿ ಸಂಸ್ಕೃತಿಯೆಂಬುದು ಅಭ್ಯಾಸಲಭ್ಯವೆಂಬುದನ್ನು ಗಮನಿಸಿ ಕಲಾವಿಲಾಸಿಗಳ ಅಸಾಮಾಜಿಕ ಕಲ್ಪನೆಗಳನ್ನು ಸಮಾಜದ ಆರೋಗ್ಯ ದೃಷ್ಟಿಯಿಂದ ಬಹಿಷ್ಕರಿಸುವ ಚಿಂತೆ ಯಾರಲ್ಲೂ ಮೂಡಿದಂತಿಲ್ಲ. ಸಮಾಜ ಕಟ್ಟಿಕೊಂಡು ಬಾಳುವ ಪ್ರತಿಯೊಂದು ನಾಗರಿಕತೆಯೂ ಸಮಾಜ ಜೀವನಕ್ಕೆ ಅಹಿತವೆನಿಸುವ ಅಂಶಗಳನ್ನು ಮಾನವನ ದೈಹಿಕ ಮತ್ತು ಮಾನಸಿಕವಾದ ಪ್ರತಿಯೊಂದು ಕಾರ್ಯಕ್ಷೇತ್ರದಿಂದಲೂ ತೆಗೆದುಹಾಕತಕ್ಕದ್ದೆಂಬುದನ್ನು ಒತ್ತಿಹೇಳುವುದವಶ್ಯ. —ಕಲಾಕಾಂತ

## ವಿಜಯಭಟ್ಟರ ವಿಜಯ

ಪ್ರಕಾಶ ಪಿಕ್ಚರ್ಸಿನ 'ರಾಮರಾಜ್ಯ'ವನ್ನು ಈಗ ಅಮೇರಿಕದಲ್ಲಿ ಪ್ರದರ್ಶಿಸಲಾಗುತ್ತಿದೆ. ಅದರ ನಿರ್ಮಾಪಕರು ಶ್ರೀ ವಿಜಯಭಟ್ಟರು. ಆಸ್ಟೋರಿಯದಲ್ಲಿ ಇಂಡಿಯನ್ ಫಿಲ್ಮ್ ಕಾನ್ಫರೆನ್ಸಿನವರು ಅವರನ್ನು ಸನ್ಮಾನಿಸಲು ಒಂದು ಭೋಜನ ಸಮಾರಂಭವನ್ನೇರ್ಪಡಿಸಿದ್ದರು.

ಹಿಂದೊಮ್ಮೆ ವಿಜಯ ಭಟ್ಟರು ಮುಂಬಯಿಯಲ್ಲಿ ೫೭ ವಾರಗಳ ವರೆಗೆ ನಡೆದ ಒಂದು ಚಿತ್ರವನ್ನು ತಯಾರಿಸಿದ್ದರು. ಇಂದು ರಾಮರಾಜ್ಯ ನಿರ್ಮಾಣದಿಂದ ಅವರು ಹಿಂದೀ ಚಲಚ್ಚಿತ್ರ ಪ್ರಪಂಚದ ವಾಲ್ಮೀಕಿ ಎಂಬ ಬಿರುದನ್ನು ಗಳಿಸಿದ್ದಾರೆ.

"ಸುಂದರವಾಗಿದೆ, ರುಚಿಕರವಾಗಿದೆ, ಕಲಾಮಯವಾಗಿದೆ, ಸೊಗಸಾಗಿದೆ" ಎಂಬ ಶಬ್ದಗಳಿಂದ ಅಮೇರಿಕನ್ನರು ಚಿತ್ರವನ್ನು ಮುಕ್ತಕಂಠದಿಂದ ಹೊಗಳಿದ್ದಾರೆ.

ಕೆಲವೇ ಜನರು ಅಭಿನಯ, ಫಿಲ್ಮಿನ ಉದ್ದ, ಹಾಡು ಈ ಮೂರರ ಮೇಲೆ ಸ್ವಲ್ಪ ಟೀಕೆ ಮಾಡಿದ್ದಾರೆ. ಒಟ್ಟಿನ ಮೇಲೆ ನೂರಕ್ಕೆ ೯೫ ಜನರು ರಾಮರಾಜ್ಯದಲ್ಲಿಯ ನಿಜವಾದ ಭಾರತೀಯತೆಗೆ ಮನಸೋತು ಮರುಳಾಗಿದ್ದಾರೆ.

ಅಮೇರಿಕದಲ್ಲಿ ಭಾರತೀಯ ಚಿತ್ರಗಳಿಗೆ ಪ್ರವೇಶ ದೊರೆವಂತೆ ಮಾಡಲು ಅಲ್ಲಿಯ ಒಂದು ಪ್ರದರ್ಶನ ರಂಗವನ್ನು ಹಿಂದೀಯರು ಕೊಳ್ಳಬೇಕೆಂದು ಭಟ್ಟರು ಸಲಹೆಮಾಡಿದ್ದಾರೆ. ಇಂಗ್ಲೆಂಡಿನವರು ಹಾಗೆ ಮಾಡಿಯೇ ತಮ್ಮ ಚಿತ್ರಗಳಿಗೆ ಅಲ್ಲಿ ಪ್ರವೇಶ ದೊರಕಿಸಿದರು.

ರಾಮರಾಜ್ಯವನ್ನು ತಯಾರಿಸಲು ೭ ಲಕ್ಷ ರೂಪಾಯಿ ಖರ್ಚಾದರೂ ಅಮೇರಿಕದ ಮಾನದಿಂದ ಅದು ಹೆಚ್ಚಲ್ಲವೆಂದು ಭಟ್ಟರಿಗೆ ಅನುಭವವಾಯಿತು. ಅಲ್ಲಿಯ ತಾಂತ್ರಿಕ ವ್ಯವಸ್ಥೆ ಬಹಳ ಮುಂಬರಿದಿದೆಯೆಂದೂ ಹಿಂದೀಯರು ಅದರಿಂದ ಬಹಳ ಅಂಶವನ್ನು ಕಲಿತುಕೊಳ್ಳಬೇಕಾಗಿದೆಯೆಂದೂ ಅವರು ಅಭಿಪ್ರಾಯಪಡುತ್ತಾರೆ. ಅಂತೂ ಭಟ್ಟರು ಭಾರತೀಯ ಚಿತ್ರಕ್ಕೆ ಪ್ರವೇಶ ದೊರಕಿಸಿ ಆಧುನಿಕ ಕೊಲಂಬಸ್ ಆದರೆಂದು ಸಿನೆವಾಯ್ಸಿನವರು ಬರೆದುದು ನಿಜ.

* * *

## ಸೋಹಾಗ್ ರಾತ್

'ಸೋಹಾಗ್ ರಾತ್' ಎಂಬದು ಓರಿಯಂಟಲ್ ಪಿಕ್ಚರ್ಸಿನ ತಯಾರಿಕೆ. ಅದನ್ನು ಎಕ್ಸೆಲ್ಸಿಯರ್ ಲ್ಯಾಮಿಂಗ್‌ಟನ್ ಮತ್ತು ಚಿತ್ರ ಎಂಬ ಮೂರು ರಂಗಗಳಲ್ಲಿ ಏಕಕಾಲದಲ್ಲಿ ಪ್ರದರ್ಶಿಸಲು ಪ್ರಯತ್ನ ನಡೆದಿದೆ. ಬೇಗಂ ಪ್ಯಾರಾ, ಭಾರತಭೂಷಣ, ಮತ್ತು ಗೀತಾಬಲಿ ಇವರು ಮುಖ್ಯ ವೇಷಧಾರಿಗಳು. ಇದು ಒಂದು ಹೃದಯ ದ್ರಾವಕವಾದ ಜನಪ್ರಿಯ ಶೃಂಗಾರ ಕಥೆ. ಅದರಲ್ಲಿ ಪ್ರೇಮ, ಸ್ವಾರ್ಥತ್ಯಾಗ, ಮತ್ತು ಇತರ ರಾಜಕೀಯವೂ ರಸಾವಹವೂ ಆದ ಗುಣಕ್ರಿಯಾ ಕೌಶಲಗಳು ಬಂದಿವೆ. ಕೇದಾರನಾಥ ಶರ್ಮರು ದಿಗ್ದರ್ಶಕರು. ಚಿತ್ರವು ಈ ಋತುವಿನ ಒಂದು ಮುಖ್ಯವಾದ ತಯಾರಿಕೆಯೆಂದು ಯಾವ ದೃಷ್ಟಿಯಿಂದ ನೋಡಿದರೂ ಹೇಳಬಹುದು ಎಂಬುದು ಸಾಮಾನ್ಯಾಭಿಪ್ರಾಯ.

* * *

## ಮೀರಾ

ಹಿಂದಮಾತಾ ರಂಗದಲ್ಲಿ ಎರಡನೆಯ ಸಲ ಪ್ರದರ್ಶಿಸಲಾಗುತ್ತಿರುವ ಮೀರಾ ಚಿತ್ರವು ಏಳು ವಾರವಾದರೂ ಇನ್ನೂ ನಡೆದೇ ಇದೆ. ಇದರ ಜನಪ್ರಿಯತೆ ಎಷ್ಟಿರಬಹುದೆಂಬದನ್ನು ಇದರಿಂದಲೇ ಕಾಣಬಹುದು. ಶ್ರೀಮತಿ ಎಂ. ಎಸ್. ಸುಬ್ಬಲಕ್ಷ್ಮಿಯ ಪಾತ್ರವೇ ಮುಖ್ಯವಾಗಿ ಎಲ್ಲರ ಮನಸ್ಸನ್ನೂ ಆಕರ್ಷಿಸಿದ್ದು. ಅವಳ ಮನೋಹರವಾದ, ಹೃದಯಂಗಮವಾದ ಹಾಡು ಅನ್ಯಾದೃಶವಾದುದು. ಅದೇ ಅವಳಿಗೆ ಸಿನೆಮ ಪ್ರಪಂಚದಲ್ಲಿ ವಿಶಿಷ್ಟ ಸ್ಥಾನವನ್ನು ಗಳಿಸಿಕೊಟ್ಟದ್ದು. ಎಲ್ಲ ಮಾನದಂಡಗಳಿಂದ ಅಳೆದರೂ ಉಳಿದೆಲ್ಲ ಚಿತ್ರಗಳನ್ನು ಮೀರಿಸಿ ಜನಪ್ರಿಯವೆನಿಸಿದ ಚಿತ್ರವೆಂದರೆ ಈ ವರೆಗೆ ಇದೊಂದೇ ಎನ್ನಬಹುದಾಗಿದೆ ಎಂದು "ಫ್ರೀಪ್ರೆಸ್" ಅಭಿಪ್ರಾಯಪಡುತ್ತದೆ.

## ಭಾರತದ ಬಗ್ಗೆ ಪಾಶ್ಚಿಮಾತ್ಯರ ಕುಟಿಲ ನೀತಿ

## ಉದಕಮಂಡಲ ಪರಿಷತ್ತಿನ ಸಿಂಹಾವಲೋಕನ

[ ಬರೆದವರು: ಶ್ರೀ ಸುರೇಂದ್ರ ದಾನಿ ]

ಮೊನ್ನೆ ಉದಕಮಂಡಳದಲ್ಲಿ ಪಂ. ನೆಹರುರವರಿಂದ ಉದ್ಘಾಟಿಸಲ್ಪಟ್ಟು ನೆರವೇರಿದ ಯುಕ್ತರಾಷ್ಟ್ರದ ಸಭೆಯ ಏಶಿಯಾ ಮತ್ತು ಪೂರ್ವರಾಷ್ಟ್ರಗಳ ಆರ್ಥಿಕ ಪರಿಷತ್ತು ಹಿಂದುಸ್ತಾನಕ್ಕಷ್ಟೇ ಅಲ್ಲದೆ ಇಡೀ ಏಶಿಯಾ ರಾಷ್ಟ್ರಗಳ ಇತಿಹಾಸದಲ್ಲಿಯೇ ಮಹತ್ವಪೂರ್ಣವಾದದ್ದು. ಯುದ್ಧೋತ್ತರ ಪುನಾರಚನೆಗಾಗಿ ಜಗತ್ತಿನ ರಾಷ್ಟ್ರಗಳೆಲ್ಲವೂ ಹಾತೊರೆಯುತ್ತಿದ್ದು ಈಗಾಗಲೆ ಯುರೋಪ್ಯ ರಾಷ್ಟ್ರಗಳು ತಮ್ಮ ಆರ್ಥಿಕ ಮತ್ತು ಔದ್ಯೋಗಿಕ ಪುನರುತ್ಥಾನಕ್ಕಾಗಿ ಮಾರ್ಶಲ್ ಯೋಜನೆಗೆ ಮೊರೆಹೊಕ್ಕದ್ದು ಎಷ್ಟು ಮಹತ್ವದ ಐತಿಹಾಸಿಕ ಸಂಗತಿಯಾಗಿದೆಯೋ ಅಷ್ಟೇ ಪ್ರಾಮುಖ್ಯದ ಸ್ಥಾನವನ್ನು ನಾವು ಉದಕಮಂಡಳದ ಈ ಪರಿಷತ್ತಿಗೂ ಸಲ್ಲಿಸಬೇಕು. ಮಾರ್ಶಲ್ ಯೋಜನೆಗೆ ಮೂರ್ತ ಸ್ವರೂಪ ಬರುವದಕ್ಕೂ ಮೊದಲು ಯುರೋಪಿನ ಹದಿನಾರು ರಾಷ್ಟ್ರಗಳು ಪ್ಯಾರಿಸಿನಲ್ಲಿ ಸಭೆಸೇರಿ ಆ ಬಗ್ಗೆ ಚರ್ಚಿಸಿದಂತೆ ಉದಕಮಂಡಳದಲ್ಲಿ ಏಶಿಯಾ ಮತ್ತು ದೂರಪ್ರಾಚ್ಯ ರಾಷ್ಟ್ರಗಳು ಸೇರಿ ತಮ್ಮ ಆರ್ಥಿಕ ಮತ್ತು ಔದ್ಯೋಗಿಕ ಪುನರುತ್ಥಾನದ ಆಗುಹೋಗುಗಳನ್ನು ಚರ್ಚಿಸಿದವು. ಇನ್ನೊಂದು ಮಾರ್ಶಲ ಯೋಜನೆಯಾಗಲಿ ಅಥವಾ ಅದೇ ಸ್ವರೂಪದ ಬೇರೆ ಯಾವದೇ ಯೋಜನೆಯಾಗಲಿ ಈ ಅಧಿವೇಶನದಲ್ಲಿ ರೂಪಗೊಳ್ಳಲಿಲ್ಲವೆಂಬುದೇನೋ ನಿಜ. ಆದರೆ ಅಂತಹ ಯೋಜನೆಯ ಬೇಡಿಕೆ, ನೆಳಲು ಪಡಿನೆಳಲುಗಳು ಈ ಅಧಿವೇಶನದ ಕಾರ್ಯಕಲಾಪಗಳಲ್ಲಿ ಕಂಡುಬರದಿರಲಾರವು.

### ಸಹಾಯ ಬೇಕು, ಸತ್ತೆ ಬೇಡ

ಜೂನ ೧ ನೇ ತಾರೀಖಿಗೆ ಪಂ. ನೆಹರುರವರು ಈ ಪರಿಷತ್ತನ್ನು ಉದ್ಘಾಟಿಸುತ್ತ ಮಾಡಿದ ಭಾಷಣವು ಅದರ ಮುಂದಿನ ಕಾರ್ಯಕಲಾಪಗಳ ಮೇಲೆ ನಿರೀಕ್ಷಿಸಿದ್ದಕ್ಕಿಂತಲೂ ಹೆಚ್ಚಿನ ಪರಿಣಾಮಗಳನ್ನು ಮಾಡಿತು. ಅವರು ತಮ್ಮ ಭಾಷಣದಲ್ಲಿ, ಜಾಗತಿಕ ಶಾಂತಿ ಅವಿಭಾಜ್ಯವೆಂದೂ ಜಗತ್ತಿನಲ್ಲಿಯ ಯಾವದೇ ಮೂಲೆಯಲ್ಲಿಯ ಅಶಾಂತಿಯು ಇತರ ಕಡೆಗಳಲ್ಲೆಲ್ಲ ಪಸರಿಸಿದ ಶಾಂತಿಯನ್ನು ಅಲ್ಲೋಲಕಲ್ಲೋಲಗೊಳಿಸಬಹುದಾದ್ದರಿಂದ ಜಗತ್ತಿನಲ್ಲಿಯ ಎಲ್ಲ ರಾಷ್ಟ್ರಗಳೂ ಸಮಾನ ಗತಿಯಿಂದ ಪ್ರಗತಿಪಥದಲ್ಲಿ ಸಾಗುವದು ಜಾಗತಿಕ ಶಾಂತಿ ಪ್ರಸ್ಥಾಪನೆಯ ಮೂಲಸೂತ್ರವೆಂದೂ ಹೇಳಿದರು. ಮತ್ತು ಇದಕ್ಕಾಗಿಯೇ ಔದ್ಯೋಗಿಕ ಕ್ಷೇತ್ರದಲ್ಲಿ ಮುಂದುವರಿದ ರಾಷ್ಟ್ರಗಳು ಇನ್ನೂ ಹಿಂದುಳಿದ ರಾಷ್ಟ್ರಗಳಿಗೆ ನೆರವು ಸಹಾಯಗಳನ್ನು ನೀಡಿ ಅವುಗಳನ್ನು ತಮ್ಮ ಸರಿಸಮಾನ ಮಟ್ಟಕ್ಕೆ ತರುವದು ಅವಶ್ಯವೆಂದು ಅಭಿಪ್ರಾಯಪಟ್ಟರು. ಆದರೆ ಯಾಂತ್ರಿಕ ಮತ್ತು ಔದ್ಯೋಗಿಕ ಕ್ಷೇತ್ರಗಳಲ್ಲಿ ಹಿಂದುಳಿದ ಈ ಏಶಿಯಾ ರಾಷ್ಟ್ರಗಳಿಗೆ ಪಾಶ್ಚಾತ್ಯ ರಾಷ್ಟ್ರಗಳ ಸಹಾಯ ಮಾತ್ರ ಬೇಕಾಗಿದೆಯೇ ಹೊರತು ಅವುಗಳ ಆರ್ಥಿಕ ಪ್ರಭುತ್ವವಲ್ಲ ಮತ್ತು ಈ ಸಹಾಯವನ್ನು ಪಾಶ್ಚಾತ್ಯ ರಾಷ್ಟ್ರಗಳು ಜಾಗತಿಕ ಶಾಂತಿಗಾಗಿ ತಾವು ಸಲ್ಲಿಸಬೇಕಾದ ಕರ್ತವ್ಯವೆಂದು ತಿಳಿದು ನೀಡಬೇಕೇ ವಿನಾ ಪೌರಸ್ತ್ಯ ರಾಷ್ಟ್ರಗಳ ಮೇಲೆ ತಾವೊಂದು ಉಪಕಾರದ ಹೊರೆಯನ್ನು ಹೊರಿಸುತ್ತೇವೆಂಬ ಭಾವನೆಯಿಂದಲ್ಲವೆಂಬದನ್ನು ಅವರು ಸ್ಪಷ್ಟಪಡಿಸಿದರು. ಏಶಿಯಾ ರಾಷ್ಟ್ರಗಳಿಗೊಂದು ಮಾರ್ಶಲ ಯೋಜನೆಯ ಕನಸನ್ನು ಕಾಣುತ್ತಿದ್ದವರಿಗೂ ಪೌರಸ್ತ್ಯ ರಾಷ್ಟ್ರಗಳು ಮತ್ತೆ ಪಾಶ್ಚಾತ್ಯ ರಾಷ್ಟ್ರಗಳ ಆರ್ಥಿಕ ಗುಲಾಮಗಿರಿಗೆ ಎಲ್ಲಿ ಒಳಗಾಗುವವೋ ಎಂಬ ಹೆದರಿಕೆಯ ಭೂತವನ್ನು ಕಾಣುತ್ತಿದ್ದವರಿಗೂ ಈ ಭಾಷಣವು ನೇತ್ರಾಂಜನವಾಯಿತು; ಪರಿಷತ್ತಿನ ಮುಂದಿನ ಕಾರ್ಯಕಲಾಪಗಳಿಗೆ ನಿಶ್ಚಿತ ಮಾರ್ಗ ಸೂಚಿಸಿಯೂಯಿತು.

ಅಲ್ಲಿ ನೆರೆದ ಎಲ್ಲ ಏಶಿಯಾ ರಾಷ್ಟ್ರಗಳೂ ಪಂ. ನೆಹರುರವರ ಈ ಅಭಿಪ್ರಾಯವನ್ನು ಸ್ವಾಗತಿಸಿದವು. ಯುರೋಪ್ಯ ರಾಷ್ಟ್ರಗಳಲ್ಲಿ ಮಾತ್ರ ಇದರ ಬಗ್ಗೆ ಭಿನ್ನಭಿನ್ನ ಪ್ರತಿಕ್ರಿಯೆ ಕಂಡುಬಂದಿತು. ಇಂಗ್ಲೆಂಡು ತನ್ನ ಅಭಿಪ್ರಾಯವನ್ನು ವ್ಯಕ್ತಗೊಳಿಸುವ ಗೋಜಿಗೇ ಹೋಗಲಿಲ್ಲ. ಇದು ರಾಜಕೀಯ ಮುತ್ಸದ್ದಿತನದ ಮೇರೆಯನ್ನು ಮೀರಿದ ಸ್ಪಷ್ಟವಾದಿತ್ವವಾಯಿತೆಂದು ಅದರ ಅಭಿಪ್ರಾಯವಾಗಿದ್ದರೂ ಆಗಿರಬಹುದು. ಅಮೇರಿಕೆಯು ನೆಹರುರವರು ವ್ಯಕ್ತಪಡಿಸಿದ ಅಭಿಪ್ರಾಯಕ್ಕೆ ತನ್ನ ಅತೃಪ್ತಿಯನ್ನೇ ಸೂಚಿಸಿತು. ಜಗತ್ತೆಲ್ಲವನ್ನೂ ತನ್ನ ಆರ್ಥಿಕ ಗುಲಾಮಗಿರಿಗೊಳಪಡಿಸಿಕೊಳ್ಳಬೇಕೆಂಬದೊಂದೇ ಅದರ ಕನಸೇನೋ! ಫ್ರಾನ್ಸ ಮತ್ತು ಹಾಲಂಡಗಳು ವಿರುದ್ಧ ಅಭಿಪ್ರಾಯಪಡುವ ಕಾರಣವೇನೂ ಇರಲಿಲ್ಲ. ಆದರೆ ಪಂ. ನೆಹರು ಅವರು ತಮ್ಮ ಭಾಷಣದಲ್ಲಿ ಇಂಡೋನೇಶಿಯದ ಸದಸ್ಯತ್ವದ ಪ್ರಶ್ನೆಯನ್ನೆತ್ತಿ ಅದರ ಬಗ್ಗೆ ಒತ್ತಾಯಪಡಿಸಿದ್ದು ಅವರ ನೇರವಾದ ಹಿತಸಂಬಂಧಗಳಿಗೇ ಏಟು ಕೊಟ್ಟಂತಾಯಿತು. ಪ್ರತಿಯೊಂದು ಹೇಳಿಕೆ ಕೇಳಿಕೆಯನ್ನೂ ಶಬ್ದಶಃ ಚರ್ವಿತಚರ್ವಣಗೊಳಿಸಿ ಪರೀಕ್ಷಿಸಿ ನೋಡುವ ರಶಿಯವು ಮಾತ್ರ ನೆಹರುರವರ ಭಾಷಣಕ್ಕೆ ತನ್ನ ಸಂಪೂರ್ಣ ಬೆಂಬಲವನ್ನು ಕೊಟ್ಟಿತು. ರಶಿಯದ ಪ್ರತಿನಿಧಿಯು ನೆಹರುರವರ ಭಾಷಣಕ್ಕೆ ತನ್ನ ಬೆಂಬಲವನ್ನು ಸೂಚಿಸುತ್ತ ಮಾಡಿದ ಭಾಷಣದಲ್ಲಿ ಏಶಿಯಾ ರಾಷ್ಟ್ರಗಳು ಯಂತ್ರ ಸಾಮಗ್ರಿಗಳನ್ನು ದೊರಕಿಸಿಕೊಳ್ಳುವ ಆಶೆಯಿಂದ ಪಾಶ್ಚಾತ್ಯ ರಾಷ್ಟ್ರಗಳ ಆರ್ಥಿಕ ಗುಲಾಮಗಿರಿಗೆ ಬಲಿಬೀಳದಿರಲೆಂದು ಮತ್ತೆ ಎಚ್ಚರಿಸಿದನು.

ಅಧ್ಯಕ್ಷ ಪದದ ಚುನಾವಣೆಯ ಪ್ರಶ್ನೆ ಬಂದಾಗ ಎಲ್ಲರೂ ಒಮ್ಮತದಿಂದ ಹಿಂದುಸ್ತಾನವನ್ನು ಆ ಸ್ಥಳಕ್ಕೆ ಆರಿಸಿದ್ದು ಕುಸು ಆಶ್ಚರ್ಯಕರವಾದ ಮಾತೇ ಸರಿ. ಅಂತಾರಾಷ್ಟ್ರೀಯ ಸಭೆ ಪರಿಷತ್ತುಗಳಲ್ಲಿ ಸಹ ಅಧಿಕಾರ ಸ್ಥಳಕ್ಕಾಗಿ ಮೇಲಾಟ ನಡೆಯುವದೆಂಬ ವಿಷಯ ಹೊಸದೇನೂ ಅಲ್ಲ. ಹಿಂದುಸ್ತಾನದ ಹೆಸರು ಅಧ್ಯಕ್ಷ ಪದಕ್ಕೆ ಸೂಚಿಸಲ್ಪಟ್ಟಾಗ ಅಮೇರಿಕೆ ಮತ್ತು ಇತರ ಯುರೋಪ ರಾಷ್ಟ್ರಗಳು ತಮ್ಮ ಬೆಂಬಲವನ್ನು ಸೂಚಿಸಿದ್ದು ಅನಿರೀಕ್ಷಿತ ಘಟನೆಯೇ ಸರಿ. ಏಶಿಯಾ ರಾಷ್ಟ್ರಗಳು ಸಾಕಷ್ಟು ಜಾಗ್ರತವಾಗಿದ್ದು ಅವು ಇನ್ನು ಮೇಲೆ ತಮ್ಮ ಪ್ರಭುತ್ವವನ್ನು ಸಹಿಸಲಾರವೆಂದು ಬಗೆದು ಮೌನ ಧರಿಸಿದವೋ ಅಥವಾ ಏಶಿಯಾ ರಾಷ್ಟ್ರಗಳ ರಾಜಕಾರಣವು ಇನ್ನೂ ತಮ್ಮ ಗೌರವದ ಮಟ್ಟಕ್ಕೆ ಬಾರದ ವಿಷಯವೆಂದು ಉಪೇಕ್ಷಿಸಿಬಿಟ್ಟವೋ! ಆದರೆ ಸದ್ಯದ ಅಂತಾರಾಷ್ಟ್ರೀಯ ರಾಜಕಾರಣವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಈ ಘಟನೆಗೆ ಎರಡನೆ ಕಾರಣಕ್ಕಿಂತಲೂ ಮೊದಲಿನದೇ ಹೆಚ್ಚು ಹೊಣೆಯಾಗಿರಬೇಕೆಂದು ಯಾರಾದರೂ ಹೇಳಬಹುದು.

### ಸಾಮ್ರಾಜ್ಯವಾದಿಗಳ ಬಣ್ಣ

ಮುಂದೆ ಇಂಡೋನೇಶಿಯಾವನ್ನು ಈ ಸಮಿತಿಯ ಸದಸ್ಯರಾಷ್ಟ್ರವನ್ನಾಗಿ ಸೇರಿಸಿಕೊಳ್ಳಬೇಕೆಂಬ ಪ್ರಶ್ನೆ ಬಂದಾಗ ಮಾತ್ರ ಎಲ್ಲ ರಾಷ್ಟ್ರಗಳ ನಿಜವಾದ ಬಣ್ಣ ಹೊರಬಿತ್ತು. ಹಿಂದುಸ್ತಾನವೇ ಮುಂದೆ ಬಂದು ಈ ಪ್ರಶ್ನೆಯನ್ನು ಮಂಡಿಸಿದಾಗ ಸ್ವಾಭಾವಿಕವಾಗಿಯೇ ಎಲ್ಲ ಏಶಿಯಾ ರಾಷ್ಟ್ರಗಳು (ಚೀನವೊಂದನ್ನು ಬಿಟ್ಟು) ಭಾರತದ ಬೆಂಬಲಕ್ಕೆ ಬಂದು ನಿಂತವು. ರಶಿಯವು ಉದ್ವೇಗ ಪೂರ್ವಕವಾಗಿಯೇ ದೂರ ಉಳಿಯಿತು. ಏಶಿಯದ ಇತಿಹಾಸದಲ್ಲಿ ಪ್ರಮುಖ ಸ್ಥಾನವನ್ನು ಪಡೆಯಬೇಕಾದ ಚೀನದಂತಹ ದೊಡ್ಡ ರಾಷ್ಟ್ರವು ಈ ಪ್ರಶ್ನೆಯ ಬಗ್ಗೆ ಮೌನ ಧರಿಸಿದ್ದೊಂದು ಗೂಢ ಪ್ರಶ್ನೆಯೇ.

— [illegible]

## ತಿದ್ದುಪಡಿ

ಮೈಸೂರಿನ ಶ್ರೀ ರಾಮಕೃಷ್ಣಾಶ್ರಮದವರು ಪ್ರಕಟಿಸಿದ 'ಶ್ರೀ ಶಾರದಾದೇವಿ' ಎಂಬ ಪುಸ್ತಕದ ಬರಹಗಾರರಾದ ಸ್ವಾಮಿ ಸೋಮನಾಥಾನಂದರ ಹೆಸರಿಗಿಂತ ಮುನ್ನುಡಿಕಾರರಾದ ಶ್ರೀ ಕುವೆಂಪು ಅವರ ಹೆಸರು ಎದ್ದು ಕಂಡುದರಿಂದ ಇವರೇ ಅದನ್ನು ಬರೆದರೆಂಬ ತಪ್ಪು ಅಭಿಪ್ರಾಯದಿಂದ ಕಳೆದ ಸಂಚಿಕೆಯಲ್ಲಿ ಅದರ ವಿಮರ್ಶೆ ಮಾಡಲಾಯಿತು. ಈಗ ವಸ್ತುಸ್ಥಿತಿ ತಿಳಿದು ಬಂದುದರಿಂದ ವಾಚಕರ ಕ್ಷಮೆ ಬೇಡಿ ಆ ವಿಮರ್ಶೆಯಲ್ಲಿ ಪುಟ್ಟಪ್ಪನವರ ಹೆಸರನ್ನೂ ಅವರ ವೈಯಕ್ತಿಕ ಲಕ್ಷಣಗಳನ್ನೂ ತೆಗೆದು ಹಾಕಿ ಓದಿಕೊಳ್ಳಬೇಕೆಂದು ವಿನಂತಿ ಮಾಡಿಕೊಳ್ಳಲಾಗಿದೆ. — ಸಂ.

# ಡೊಂಕು ಒಡ್ಡುಗಳ ಹಣೆಬರಹ

ಒಕ್ಕಲತನದಲ್ಲಿ ಆಧುನಿಕ ಪದ್ಧತಿಯನ್ನು ಬಳಕೆಗೆ ತರುವ ಹುರುಪು ಈಚೆಗೆ ಒಕ್ಕಲತನದ ಸರಿಯಾದ ಅರಿವಿಲ್ಲದವರಿಗೆಲ್ಲ ವಿಶೇಷವಾಗಿ ಬಿಟ್ಟಿದೆ. ಅಮೇರಿಕೆಯಲ್ಲಿ ಹೀಗೆ ಮಾಡುತ್ತಾರೆ, ಇಂಗ್ಲೆಂಡಿನಲ್ಲಿ ಹಾಗೆ ಮಾಡುತ್ತಾರೆ, ಇನ್ನೊಂದೆಡೆ ಇನ್ನೊಂದು ಬಗೆಯಾಗಿ ಮಾಡುತ್ತಾರೆ; ಅಲ್ಲಿ ಎಕರೆಗೆ ಇಷ್ಟು ಸಾವಿರ ಬುಶೆಲ್ ಗೋದಿ ದೊರೆಯುತ್ತದೆ ಇಲ್ಲಿ ಅದರ ಅರ್ಧ ಕೂಡ ದೊರೆಯುವದಿಲ್ಲ; ಆದುದರಿಂದ ಅಲ್ಲಿಯ ಪದ್ಧತಿಯನ್ನು ಇಲ್ಲಿ ಕಣ್ಮುಚ್ಚಿ ಅನುಕರಿಸಿದರೆ ಇಲ್ಲಿಯೂ ಭೂಮಿತಾಯಿ ಕಣ್ಮುಚ್ಚಿ ಅಲ್ಲಿನಂತೆಯೇ ಫಲಕೊಡುತ್ತಾಳೆ.—ಹೀಗೆಂದು ಅನೇಕರ ಉತ್ಸಾಹತಿರೇಕ. ಮುಂಬಯಿ ಪ್ರಾಂತದ ಭೂ ಸುಧಾರಣೆಯ ವಿಚಾರಣ ಸಮಿತಿಯವರು (ಧಡೆ ಸಮಿತಿ) ಇದೀಗ ಹೊರಡಿಸಿದ ವರದಿಯನ್ನು ಓದಿದರೆ ಈ ಬಗೆಯ ಉತ್ಸಾಹಾತಿರೇಕಕ್ಕೆ ತುಸು ತಣ್ಣೀರೆರಚಿದಂತಾಗದಿರದು.

ಧಡೆ ಸಮಿತಿಯ ವರದಿಯಲ್ಲಿ ಸರಕಾರದವರು ಇದೇ ಪ್ರಾಂತದಲ್ಲಿ ಕೈಕೊಂಡ ಬೇರೆ ಬೇರೆ ಭೂ ಸುಧಾರಣ ಕ್ರಮಗಳನ್ನು ಪರಿಶೀಲಿಸಿ ಸೂಚನೆಗಳು ಮಾಡಲ್ಪಟ್ಟಿದ್ದರೂ ದಕ್ಷಿಣ ಭಾಗದಲ್ಲಿ, ಮುಖ್ಯವಾಗಿ ವಿಜಾಪುರ ಜಿಲ್ಹೆಯಲ್ಲಿ ಬಹಳ ಕಡೆ ಪ್ರಯೋಗಿಸಲ್ಪಟ್ಟ ಅಂಕುಡೊಂಕು ಒಡ್ಡುಗಳ ಬಗ್ಗೆ ಸಮಿತಿಯವರ ವಿಚಾರಗಳನ್ನಷ್ಟೆ ಇಲ್ಲಿ ಸಂಗ್ರಹಿಸಲಾಗುವದು. ಏಕೆಂದರೆ ಇದು ಕರ್ನಾಟಕದ ರೈತರಿಗೆ ವಿಶೇಷ ಮಹತ್ವದ ಸಂಗತಿ. ಕೆಲವುಸಲ ಹೊಸ ವೈದ್ಯನಿಗಿಂತ ಹಳೆ ರೋಗಿ ಮೇಲು ಎಂಬ ಹಳ್ಳಿಯ ಗಾದೆಗೆ ಈ ಡೊಂಕು ಒಡ್ಡುಗಳನ್ನು ಮಾಡಿಸಿದ 'ತಜ್ಞ'ರು ಒಂದು ದೃಷ್ಟಾಂತವಾದರೆಂದು ಹೇಳಬಹುದು.

### ಸಾಸ್‌ಮನ್ನರ "ಅಭೂತಪೂರ್ವ" ಆವಿಷ್ಕಾರ !

ಡೊಂಕು ಒಡ್ಡುಗಳ ಉಪಯುಕ್ತತೆಯನ್ನು ಅಮೇರಿಕೆಯಲ್ಲಿ ನಡೆದ ಪ್ರಯೋಗಗಳ ಆಧಾರದ ಮೇಲೆ ನಮ್ಮ ಕೃಷಿ ಅಧಿಕಾರಿಗಳು ಕಣ್ಮುಚ್ಚಿ ಒಪ್ಪಿಕೊಂಡು ಬಿಟ್ಟದ್ದೇ ಲಕ್ಷಾಂತರ ರೂಪಾಯಿ ಸಾರ್ವಜನಿಕ ಹಣದ ಅಪವ್ಯಯಕ್ಕೆ ಕಾರಣವಾಯಿತೆನ್ನಬಹುದು. ಅದರ ಆವಶ್ಯಕತೆಯೂ ಸಂಬಂಧಪಟ್ಟ ಅಧಿಕಾರಿಗಳ ಮಿತಿಮೀರಿದ ಉತ್ಸಾಹವೂ ಡೊಂಕು ಒಡ್ಡುಗಳಲ್ಲಿದ್ದ ದೋಷಗಳು ಒಂದೇ ಮಳೆಗಾಲದಲ್ಲಿ ಸ್ಪಷ್ಟವಾಗಿ ಗೋಚರಕ್ಕೆ ಬಂದರೂ ಅದರ ಕಡೆಗೆ ಅವರು ತೋರಿಸಿದ ಅಲಕ್ಷವೂ ಈ ಅಪಾರ ಧನಹಾನಿಗೆ ಕಾರಣವಾದವು. ೧೯೪೨-೪೩ರ ವಿಜಾಪುರ ಬರಗಾಲದ ಕಾಲವಾಗಿತ್ತಷ್ಟು. ಅರಣ್ಯಶಾಖೆಯಿಂದ ಕೃಷಿ ಇಲಾಖೆಗೆ ವರ್ಗಾಯಿಸಲ್ಪಟ್ಟು ಪಂಜಾಬಕ್ಕೆ ಹೋಗಿ ಅಲ್ಲಿಯ ಭೂಸಂರಕ್ಷಣೆಯ ಉಪಾಯಗಳನ್ನು ಅಭ್ಯಸಿಸಿ ತಜ್ಞಪಟ್ಟಕ್ಕೇರಿದ ವಿ. ಎ. ಎಸ್ ಸಾಸಮನ್ ದೊರೆಗಳನ್ನು ದಕ್ಷಿಣ ಭಾಗದ ಭೂಸುಧಾರಣೆಯ ಅಧಿಕಾರಿಗಳಾಗಿ ೧೧೦೦.೫೦-೧೩೦೦ ಪಗಾರದ ಮೇಲೆ ಆಗಿನ ಜೊತೆಗೆಟ್ಟ (೯೩ ನೆ ಕಲಮಿನ) ಗವರ್ನರ ರಾಜ್ಯವು ಮುಂಬಯಿ ಪ್ರಾಂತವನ್ನು ನಂದನವನವಾಗಿ ಮಾಡುವ ಯೋಜನೆಯನ್ನೂ ನೇಮಿಸಿತ್ತು. ೧೯೪೩ ನವಂಬರದಲ್ಲಿ ಬರಗಾಲ ಪರಿಸ್ಥಿತಿ ಸಮಾಪ್ತವಾಯಿತೆಂದು ಸಾರುವ ಮೊದಲೇ ವಿಜಾಪುರ ಜಿಲ್ಹೆಯೊಂದರಲ್ಲೇ ಈ ಹೊಚ್ಚಹೊಸ—ಈ ದೇಶದಲ್ಲಿ ಇನ್ನೂ ಪ್ರಯೋಗದಿಂದ ಸಿದ್ಧವಾಗದ—ಡೊಂಕು ಒಡ್ಡುಗಳಿಗಾಗಿ ೧೦.೫೯ ಲಕ್ಷ ರೂಪಾಯಿಗಳನ್ನು ಸಾಸಮನ್ ದೊರೆಗಳು ಸುರಿದರು. ೩೭ ಸಾವಿರ ಎಕರೆ ಮೀರಿ ಭೂಮಿಗೆ ಅಂಕು ಡೊಂಕು ಒಡ್ಡುಗಳಾದವು. ಅನುಭವಸ್ಥ ಅಧಿಕಾರಿಗಳೂ ಒಕ್ಕಲಿಗರೂ ಎತ್ತಿದ ಆಕ್ಷೇಪಗಳಿಗೆ ಯಾರೂ ಕಿವಿಗೊಡಲಿಲ್ಲ. ಹೇಳಿಕೇಳಿ ಬರಗಾಲದ ಸಮಯ, ಮನೆ ಬಾಗಿಲಿಗೆ ಕೆಲಸ ಬಂದಿದೆ. ಆದುದರಿಂದ ಜನರೂ ಬಹಳ ವಿರೋಧ ಮಾಡಲಿಲ್ಲ. ಇದ್ದ ಬಿದ್ದ ವಿರೋಧವೂ ಸಾಸಮನ್ ದೊರೆಗಳ ಪ್ರಚಾರದ ಹೊಳೆಯಲ್ಲಿ ಕೊಚ್ಚಿ ಹೋಯಿತು. ಅವರು ಭಾಷಣಗಳಿಂದ, ಲಾವಣಿ ಹಾಡುಗಳಿಂದ, ಚಿತ್ರ-ಹಸ್ತಪತ್ರ ಭಿತ್ತಿಪತ್ರಗಳಿಂದ ಡೊಂಕು ಒಡ್ಡುಗಳು ದೇವದತ್ತ ವರಪ್ರದಾನವೆಂದು ಜಿಲ್ಹೆ ತುಂಬ ಪ್ರಚಾರ ಮಾಡಿ ಜನರನ್ನು ಮರುಳುಗೊಳಿಸಿದರೆಂದು ಧಡೆ ವರದಿ ತೋರಿಸಿಕೊಟ್ಟಿದೆ. ಒಂದು ಭಿತ್ತಿಪತ್ರವಂತೂ "ಡೊಂಕು ಒಡ್ಡೆಂಬುದು ಬೆಂಕಿಯ ಮತ್ತು ಚಕ್ರದ ಉಪಯೋಗವನ್ನು ಮಾನವನು ಕಂಡು ಹಿಡಿದದ್ದರಷ್ಟೇ ಅಭೂತಪೂರ್ವವಾದ ಆವಿಷ್ಕಾರ" ಎಂದು ಕಿರಿಚುತ್ತಿತ್ತಂತೆ.

### ದೋಷಗಳು

ಒಂದು ಮಳೆ ಬಿದ್ದದ್ದೇ ತಡ, ಈ ಒಡ್ಡುಗಳು ಅಲ್ಲಲ್ಲಿ ಒಡೆದು ಹೋದವು. ರೈತರು ದೂರಿಕೊಂಡರು. ಆದರೆ ಅದಕ್ಕೆ ಭೂಮಿಯ ಪ್ರಾಕೃತಿಕ ಏರು ತಗ್ಗುಗಳಿಗೂ ಈ ಒಡ್ಡುಗಳಿಗೂ ಅಲ್ಲಲ್ಲಿ ಸ್ವಲ್ಪ ಸ್ವಲ್ಪ ವ್ಯತ್ಯಾಸವಿದ್ದದ್ದೇ ಕಾರಣವೆಂದು ಈ "ತಜ್ಞ"ರು ದುರ್ಲಕ್ಷಿಸಿ ಬಿಟ್ಟರೇ ಹೊರತು ನಮ್ಮಲ್ಲಿಯ ಸ್ಥಿತಿಗತಿಗೂ ಅಮೇರಿಕೆಯಲ್ಲಿದ್ದುದಕ್ಕೂ ಬಹಳ ಅಂತರವಿದೆಯೆಂಬುದನ್ನು ಯಾರೂ ಗಮನಿಸಲೇ ಇಲ್ಲ. ಸಾಲದ್ದಕ್ಕೆ ಒಡ್ಡುಗಳ ರಚನೆಯೂ ಗಟ್ಟಿಮುಟ್ಟಾಗಿದ್ದಿಲ್ಲ. ಸಾಸ್‌ಮನ್ನರು ಭಾರೀ ಅವಸರದಲ್ಲಿದ್ದರು. ಅವರು ತಮ್ಮ ಸಹಾಯಕ್ಕಾಗಿ ಸೇರಿಸಿಕೊಂಡ ಜನರಿಗೆ ಆವಶ್ಯಕ ಅನುಭವವೂ ಇದ್ದಿಲ್ಲ, ಸಾಕಷ್ಟು ಸಮಯವೂ ಇದ್ದಿಲ್ಲ.

ಡೊಂಕು ಒಡ್ಡುಗಳ ಡೊಂಕುತನ ಇಷ್ಟಕ್ಕೇ ತೀರಲಿಲ್ಲ. ಈ ಒಡ್ಡುಗಳು ಎಷ್ಟೋ ವೇಳೆ ಒಬ್ಬರ ಮಾಲ್ಕಿಯ ಹೊಲದಿಂದ ಹೊರಟು ಇನ್ನೊಬ್ಬರದನ್ನು ಅತಿಕ್ರಮಿಸಿ ಹೋಗಿದ್ದರೂ ಊಳುವವನಿಗೇನೂ ಕಡಿಮೆ ತೊಂದರೆ ಕೊಡಲಿಲ್ಲ. ಒಮ್ಮೊಮ್ಮೆ ಅಂಕುಡೊಂಕಿನಲ್ಲಿ ಒಂದು ಒಡ್ಡು ಇನ್ನೊಂದಕ್ಕೆ ಎಷ್ಟು ಸಮೀಪವಾಗಿ ಹೋಗುತಿತ್ತೆಂದರೆ ಅದರ ನಡುವೆ ಗಳೆ ಹೊಡೆದುಕೊಂಡು ಹೋಗುವದು ಕಠಿಣಹೋಗುತ್ತಿತ್ತು. ಇನ್ನು ಒಡ್ಡುಗಳ ಅಂತಸ್ತುಗಳ ಅಂತರವೂ ಅತಿರೇಕವಾಗಿತ್ತೆಂದು ಸಮಿತಿಯವರು ಕಂಡುಕೊಂಡರು. ಅಮೇರಿಕೆಯಲ್ಲಿ ಅಂತರ ೩ ಅಡಿಗಿಂತ ಹೆಚ್ಚಾಗಿರುವದಿಲ್ಲವಂತೆ. ರೈತನಿಗೆ ಇವು ಉಪದ್ರವಕಾರಿಯಾದವು.

### ಅಕ್ಷಮ್ಯ ಅಪರಾಧ

ಬರಗಾಲದಲ್ಲಿ ಜನರಿಗೆ ಏನಾದರೊಂದು ಪರಿಹಾರೋಪಾಯ ಒದಗಿಸಬೇಕಾಗುತ್ತದಾದುದರಿಂದ ಈ ಒಡ್ಡುಗಳ ರಚನೆಯಲ್ಲಾದ ಅತ್ಯವಸರ ಮತ್ತು ಲೋಪದೋಷಗಳನ್ನು ಕದಾಚಿತ್ ಕ್ಷಮಿಸಬಹುದು. ಆದರೆ ೭೦೦೦೦ ಎಕರೆ ಭೂಮಿಯನ್ನು ಡೊಂಕು ಒಡ್ಡುಗಳ ಪ್ರಯೋಗಕ್ಕೆ ಗುರಿಮಾಡಿ ಅದರ ಲೋಪ ದೋಷಗಳು ಕಣ್ಣಿಗೆ ಬಿದ್ದಿದ್ದರೂ ಇನ್ನಷ್ಟು ಭರದಿಂದ ಈ ಯೋಜನೆಗಳನ್ನು ಮುಂದೊತ್ತಿದ್ದುದು ಸಾಸ್‌ಮನ್ನರ ಅಕ್ಷಮ್ಯ ಅಪರಾಧವೆಂದು ಸಮಿತಿ ಅಭಿಪ್ರಾಯಪಟ್ಟಿದೆ. ವಿಜಾಪುರ, ಧಾರವಾಡ, ಬೆಳಗಾವಿ ಜಿಲ್ಹೆಗಳಲ್ಲಿ ಬರಗಾಲ ಪರಿಸ್ಥಿತಿ ಇಲ್ಲದಂತಾದ ಮೇಲೆ ಈ ಯೋಜನೆಗೆ ೫೦ ಲಕ್ಷ ರೂಪಾಯಿ ವೆಚ್ಚಮಾಡಿ ಮತ್ತೆ ಲಕ್ಷಾಂತರ ಎಕರೆ ಭೂಮಿಗೆ ಹೊಸ ಒಡ್ಡು ಹಾಕಲಾಯಿತು. ರೈತರಿಂದ ಎಕರೆಗೆ ೯ ರೂಪಾಯಿಯಂತೆ ಇದರ ವೆಚ್ಚವನ್ನು ವಸೂಲ ಮಾಡಬೇಕೆಂದಾಯಿತು. ಸಾವಿರಗಟ್ಲೆ ಸಂಬಳದ ಹೊಸ ಅಧಿಕಾರಿಗಳ ನೇಮಕವಾಗತೊಡಗಿತು. ಯುದ್ಧದಿಂದ ಮರಳಿದವರಿಗೆ ಕೆಲಸ ಒದಗಿಸುವ ಆವಶ್ಯಕತೆಯೇ ಈ ಯೋಜನೆಯನ್ನು ಮುಂದೊತ್ತಲು ಸರಕಾರವನ್ನು ಒತ್ತಾಯಗೊಳಿಸಿತೆಂದು ಸಮಿತಿ ಸ್ಪಷ್ಟವಾಗಿ ಹೇಳಿದೆ.

### ಮುಂದೇನು ?

ಇನ್ನೂ ಅನೇಕ ಸಂಗತಿಗಳನ್ನು ಸಮಿತಿ ಬಯಲಿಗೆಳೆದಿದೆ. ಸ್ಥಳಾಭಾವದಿಂದ ಅವನ್ನೆಲ್ಲ ಇಲ್ಲಿ ಪ್ರಸ್ತಾವಿಸಲು ಸಾಧ್ಯವಿಲ್ಲ. ೧೯೪೬ರಲ್ಲಿ ತಿರುಗಿ ಜನಪ್ರಿಯ ಸರಕಾರ ಬಂದ ಮೇಲೆ ಈ "ಅಂಧಾದರ್ಬಾರು" ಬಹಳ ದಿನ ಸಾಗಲಿಲ್ಲ. ಜನರ ದೂರನ್ನು ಕೇಳಿ ಅದು ಈ ಒಡ್ಡುಗಳ ನಿರ್ಮಾಣವನ್ನು ನಿಲ್ಲಿಸಿ ವಿಚಾರಣ ಸಮಿತಿಯನ್ನು ನೇಮಿಸಿತು. ಈ ಒಡ್ಡುಗಳ ಯೋಜನೆಯನ್ನು ಇನ್ನು ಹೀಗೆಯೆ ಮುಂದೊತ್ತಬಾರದೆಂದು ಸಮಿತಿಯ ಸೂಚನೆಯಿದೆ. ಸಂಪೂರ್ಣ ವಿವರಗಳನ್ನು ಸಂಗ್ರಹಿಸಿ ಪ್ರತಿಯೊಂದು ಭಾಗವನ್ನೂ ಪ್ರತ್ಯೇಕ ಯೋಜನೆಯೆಂದೆ ಬಗೆದು ಸರಿಯಾದ ಹಂಚಿಕೆ ಮಾಡಿಯೆ ಈ ಒಡ್ಡುಗಳನ್ನು ಹಾಕಬೇಕಲ್ಲದೆ ಸಿಕ್ಕಂತೆ ಹಾಕಬಾರದು. ಹೊಲದೊಡೆಯರಿಗೆ ಯೋಗ್ಯ ನಕ್ಷೆ, ಬರಬಹುದಾದ ವೆಚ್ಚ ಮೊದಲಾದವುಗಳ ಸರಿಯಾದ ತಿಳಿವಳಿಕೆ ಮಾಡಿ ಕೊಟ್ಟೇ ಕೆಲಸಕ್ಕೆ ಕೈಹಾಕಬೇಕು. ಮತ್ತು ಅದರ ವೆಚ್ಚದಲ್ಲಿ ಅರ್ಧವನ್ನು ಸರಕಾರವೇ ವಹಿಸಿ ಉಳಿದುದನ್ನು ಕಂತುಗಳಲ್ಲಿ ವಸೂಲು ಮಾಡಬೇಕು. ಈಗಾಗಲೆ ಹಾಕಿರುವ ಒಡ್ಡುಗಳ ವೆಚ್ಚವನ್ನು ಹೊಲದೊಡೆಯರಿಂದ ವಸೂಲು ಮಾಡುವಾಗ ಅವರು ಕೊಡುವ ದೂರುಗಳನ್ನು ಅವುಗಳ ಗುಣಾವಗುಣಗಳ ಮೇಲೆ ಪರಿಶೀಲಿಸಿ ವಸೂಲು ಮಾಡಬೇಕು. ಹಾಕಿದ ಒಡ್ಡುಗಳ ಸಂಘಟನೆಯನ್ನು ಸರಿಯಾಗಿ ಮಾಡಬೇಕೆಂದು ಸೂಚಿಸಲಾಗಿದೆ. ಇವೆಲ್ಲವನ್ನು ಸರಕಾರ ಅಂಗೀಕರಿಸಿದೆ.

# ಭಾರತದ ಬಗ್ಗೆ ಪಾಶ್ಚಿಮಾತ್ಯರ ಕುಟಿಲ ನೀತಿ

(೧೧ನೆಯ ಪುಟದಿಂದ)

ಅಮೇರಿಕೆ ಹಾಗು ಯುರೋಪ ರಾಷ್ಟ್ರಗಳು ತಮ್ಮ ಖಂಡತುಂಡ ವಿರೋಧವನ್ನು ಪ್ರಕಟಿಸಿದವು. ಈ ಎಲ್ಲ ರಾಷ್ಟ್ರಗಳಿಗೂ ಇಂಡೋನೇಶಿಯದಲ್ಲಿ ಒಂದಿಲ್ಲೊಂದು ಬಗೆಯಿಂದ ಇದ್ದ ಹಿತಸಂಬಂಧಗಳೇ ಇದಕ್ಕೆ ಕಾರಣ. ಡಚ್ಚರೇ ಇಂಡೋನೇಶಿಯವನ್ನು ಆಳುತ್ತಿದ್ದು ತಮ್ಮ ಗುಲಾಮ ರಾಷ್ಟ್ರವು ಅಂತಾರಾಷ್ಟ್ರೀಯ ಸಭೆ ಸಮ್ಮೇಲನಗಳಲ್ಲಿ ತಮ್ಮ ಸರಿಸಮಾನ ದರ್ಜೆಯಲ್ಲಿ ಬಂದು ಕೂಡುವದು ಅದಕ್ಕೆ ಸಹಿಸಲಾಗಲಿಲ್ಲ. ಇಂಡೋನೇಶಿಯಕ್ಕೆ ಈ ಸಮಿತಿಯಲ್ಲಿ ಸ್ಥಾನ ದೊರೆತನಂತರ ವಿಯೆಟ ನಾಮಕ್ಕೇಕೆ ಬೇಡ? ಈ ಪ್ರಶ್ನೆ ಸ್ವಾಭಾವಿಕವಾಗಿಯೇ ಫ್ರಾನ್ಸದ ಹಿತಸಂಬಂಧಗಳಿಗೆ ಧಕ್ಕೆ ತರುವಂತಹದಿರುವದರಿಂದ ಫ್ರಾನ್ಸೂ ಈ ಪ್ರಶ್ನೆಯನ್ನು ಸಾಕಷ್ಟು ದೂರವಿಡಲು ಪ್ರಯತ್ನಿಸಿತು. ಬೆವಿನ್ ಯೋಜನೆಯನ್ನು ತಯಾರಿಸಿ ಇಡೀ ಯುರೋಪನ್ನೇ ತನ್ನ ಬಲೆಯಲ್ಲಿ ಸಿಗಿಸಿಕೊಂಡು ಕಳೆದು ಹೋದ ಮುಂದಾಳ್ತನವನ್ನು ತಿರುಗಿ ಸಂಪಾದಿಸಲು ಪ್ರಯತ್ನಿಸುತ್ತಿರುವ ಇಂಗ್ಲಂಡು ಫ್ರಾನ್ಸ ಹಾಲಂಡಗಳ ಹಿತಸಂಬಂಧಗಳಿಗೆ ಧಕ್ಕೆ ಬರುವಂತಹ ಕೃತಿಯನ್ನೆಸಗಲು ಸಿದ್ಧವಾಗಲಿಲ್ಲ. ಅಮೇರಿಕೆಯಂತೂ ಭಾರತವು ಈ ಪ್ರಶ್ನೆಯ ಬಗ್ಗೆ ಹಟತೊಟ್ಟದ್ದೇ ಅದರೆ ತಾನು ಹೈದರಾಬಾದ ಪ್ರಶ್ನೆಯನ್ನು ಈ ಮಟ್ಟಕ್ಕೆ ತರಬೇಕಾಗಿ ಬರುವದೆಂದು ಒಂದು ದೊಡ್ಡ ಬೆದರುಗುಂಡನ್ನೇ ಒಗೆಯಿತು. ಅಂತೂ ಕೊನೆಗೆ ಈ ಪ್ರಶ್ನೆಯನ್ನು ಮತಗಣನೆಗೆ ಹಾಕಿದಾಗ ಭಾರತಕ್ಕೆ ಸೋಲುಂಟಾಗಿ ಇಂಡೋನೇಶಿಯದ ಸದಸ್ಯತ್ವದ ಪ್ರಶ್ನೆಯನ್ನು ತಾತ್ಪೂರ್ತಿಕವಾಗಿ ಮುಂದೂಡಲಾಯಿತು.

### ಬಿಳಿಯರ ಅಸೂಯೆ

ಏಶಿಯಾ ಆರ್ಥಿಕ ಸಮಿತಿಯ ಕಚೇರಿಯನ್ನು ಭಾರತಕ್ಕೆ ಸ್ಥಳಾಂತರಿಸಬೇಕೆಂಬ ಭಾರತದ ಬೇಡಿಕೆಯನ್ನು ಐರೋಪ್ಯ ರಾಷ್ಟ್ರಗಳು ಒಮ್ಮತದಿಂದ ವಿರೋಧಿಸಿ ತಳ್ಳಿಹಾಕಿಬಿಟ್ಟವು. ಅಂತಾರಾಷ್ಟ್ರೀಯ ರಾಜಕಾರಣದಲ್ಲಿ ಭಾರತವು ಇನ್ನೂ ತನ್ನ ಪ್ರಥಮ ಹೆಜ್ಜೆಯನ್ನಿಡುತ್ತಿದೆ. ಅದಿನ್ನೂ ರಶಿಯ ಅಮೇರಿಕೆಗಳೊಡನೆ ಸರಿಸಮ ಹೋರಾಡಬಲ್ಲ ಗಣ್ಯ ಶಕ್ತಿಯೆನಿಸಿಕೊಂಡಿಲ್ಲ. ಅಂತಾರಾಷ್ಟ್ರೀಯ ರಾಜಕಾರಣದಲ್ಲಿ ನಡೆಯುತ್ತಿರುವ ಹೇಚುಪೇಚುಗಳಲ್ಲಿಯೂ ಅದಿನ್ನೂ ಪಳಗಿಲ್ಲ. ಆದರೂ ಅದಕ್ಕುಂಟಾಗುತ್ತಿರುವ ಈ ಸೋಲುಗಳು ಒಂದು ವಿಚಿತ್ರ ಹಿನ್ನೆಲೆಯನ್ನು ಸೂಚಿಸುತ್ತವೆ. ಇಂದಿಲ್ಲ ನಾಳೆಯಾದರೂ ಭಾರತವು ಒಂದು ಜಾಗತಿಕ ಶಕ್ತಿಯಾಗತಕ್ಕದ್ದೇ. ಅದರ ಭೌಗೋಲಿಕ ಮತ್ತು ನೈಸರ್ಗಿಕ ಸ್ಥಾನಮಾನಗಳು ಈ ಭವಿಷ್ಯವನ್ನು ಎಂದೋ ಬರೆದಿಟ್ಟವೆ. ಇದರಿಂದ ತಮ್ಮ ಸ್ಥಾನಮಾನಗಳಿಗೆ ಭಂಗ ಬಂದೀತೆಂಬ ಹೆದರಿಕೆ ಪಾಶ್ಚಿಮಾತ್ಯ ರಾಷ್ಟ್ರಗಳಿಗಿದ್ದೇ ಇದೆ. ಇಷ್ಟು ದಿವಸಗಳ ವರೆಗೆ ತಮ್ಮ ಕಾಲ್ಕೆಳಗೆ ಸಿಕ್ಕು ಕಷ್ಟಪಟ್ಟ ಏಶಿಯಾ ರಾಷ್ಟ್ರಗಳು ಇಂದು ಮತ್ತೆ ತಲೆಯೆತ್ತಿ ಜಗತ್ತಿನಲ್ಲಿ ತೃತೀಯ ಶಕ್ತಿಯಾಗುವದು ಅವಕ್ಕೆ ಬೇಕಾಗಿಲ್ಲ. ಏಶಿಯಾ ರಾಷ್ಟ್ರಗಳಿಗೆ ಪಾಶ್ಚಿಮಾತ್ಯ ರಾಷ್ಟ್ರಗಳ ಮೇಲಿನ ವಿಶ್ವಾಸ ಎಂದೋ ಹಾರಿ ಹೋಗಿದೆ. ಅವುಗಳ ಆಶಾಕಿರಣಗಳೆಂದರೆ ಚೀನ ಮತ್ತು ಹಿಂದುಸ್ತಾನಗಳೆರಡೇ. ಚೀನವಾದರೊ ತನ್ನ ಅಂತರಿಕ ಕಲಹಗಳಿಂದ ಜರ್ಜರಿತವಾಗಿ ಅಂತಾರಾಷ್ಟ್ರೀಯ ರಾಜಕಾರಣದೆಡೆಗೆ ಲಕ್ಷ್ಯ ಹಾಕದಷ್ಟು ನಿರ್ವಿಣ್ಣವಾಗಿದೆ. ಆದ್ದರಿಂದ ಏಶಿಯಾ ರಾಷ್ಟ್ರಗಳ ಮುಖಂಡತ್ವವನ್ನು ಭಾರತವೊಂದೇ ನಿರ್ವಹಿಸಬಲ್ಲದು. ಈ ರೀತಿ ಏಶಿಯಾ ರಾಷ್ಟ್ರಗಳ ಬೆಂಬಲದಿಂದ ಜಗತ್ತಿನಲ್ಲಿ ತೃತೀಯ ಶಕ್ತಿಯಾಗಲಿರುವ ಭಾರತದ ಏಳ್ಗೆಯನ್ನು ಪಾಶ್ಚಿಮಾತ್ಯ ರಾಷ್ಟ್ರಗಳು ಸಹಿಸುವುದೆಂತು? ಮೊಳಕೆಯೊಡೆಯುವಾಗಲೇ ಗಿಡವನ್ನು ಚಿವುಟಿ ಒಗೆಯಬೇಕೆಂಬುದು ಅವರ ನೀತಿ. ಸ್ವತಂತ್ರ ಮತ್ತು ಪ್ರಗತಿಪರ ಭಾರತವು ಅವರ ಮಾರ್ಗದಲ್ಲೊಂದು ಮುಳ್ಳಾಗಿದೆ. ಆದ್ದರಿಂದಲೇ ಪಾಶ್ಚಿಮಾತ್ಯ ರಾಷ್ಟ್ರಗಳು ಸಂದರ್ಭ ಸಿಕ್ಕಾಗೆಲ್ಲ ಭಾರತವನ್ನು ಸೋಲಿಸಿ ಹಿಮ್ಮೆಟ್ಟಿಸಿ ಅದರ ಪ್ರಗತಿಯನ್ನು ಕುಂಠಿಸುತಿವೆ.

**ಚಿಕ್ಕಕತೆ**

ಲೇಖಕ– ಬಾಗ್ಲೋಡಿ ದೇವರಾಯ
ಬಿ. ಎ. (ಆನರ್ಸ್.)

# ಸಾವಿತ್ರೀ – ಸತ್ಯವಾನ

ನಾನು ಹೇಳದೆ, ಕೇಳದೆ ಮನೆಯಿಂದ ಫರಾರಿಯಾಗಿದ್ದ ಕಾಲ ಎಲ್ಲೆಲ್ಲೋ ಸುತ್ತಾಡಿದೆ. ಪರೀಕ್ಷೆಯಲ್ಲಿ ಎರಡನೇಬಾರಿಯೂ ಲಾಗಾ ಹಾಕಿದ ನಂತರ, ಜೀವನದಲ್ಲೇ ವಿರಕ್ತಿಯುಂಟಾಯಿತು. ಈ ಇಂಗ್ಲೀಷು ವಿದ್ಯೆ ನಮ್ಮ ಕರಿ ಜನರಿಗೆ ರಕ್ತಗತವಾಗುವ ಬಾಬತು ಅಲ್ಲವೆಂಬ ಗಾಂಧೀ ವಿಚಾರವೂ ಸಮುತಾವಾದದ ಒಂದೆರಡು ತುಣುಕು ಚೂರುಗಳೂ ಇಂಗ್ಲಿಷ ಲೆಕ್ಕಗಳಿಗೆ ಅಭೇದ್ಯವಾಗಿದ್ದ ನನ್ನ ತಲೆಬುರುಡೆಯೊಳಗೆ ಸೇರಿಕೊಂಡುವು. ಹಾಗೆನೇ ಯೋಚಿಸಿ, ನನ್ನ ಪುಸ್ತಕಗಳನ್ನೆಲ್ಲಾ ಗುಟ್ಟಾಗಿ ಮಾರಿ, ಚತುರ್ಥ ಲಾಗಕ್ಕೆ, ಅಂದರೆ ನಾಲ್ಕನೇ ಪರೀಕ್ಷೆಗೆ ಕಟ್ಟಲೆಂದು ಅಪ್ಪ ಕೊಟ್ಟ ಹಣವನ್ನು ಸೇರಿಸಿ, ಅಲ್ಲದೆ ಅಪ್ಪನ ಪೆಟ್ಟಿಗೆಯಿಂದ ಒಂದು ನೂರರ ನೋಟನ್ನು, ಅಮ್ಮನ ಒಂದು "ಬೋರಿಸರ"ವನ್ನು ಹಾರಿಸಿ, ಊರಿಂದ ಕಂಬಿಕಿತ್ತೆ.

ಎಲ್ಲೆಲೋ ಅಲೆದಾಡಿದೆ ಸ್ವಾಮಿ. ಬೊಂಬಾಯಿ ಪೇಟೆಯಿಂದ ಹಿಡಿದು, ಹಳ್ಳೀಕಾಡಿನ ವರೆಗೆ ಪಿಶಾಚಿಯಂತೆ ಅಲೆದೆ. ಪತ್ರಿಕಾ ಪ್ರತಿನಿಧಿ, ಶೇರ್ ಮಾರ್ಕೇಟಿನ ದಳ್ಳಾಳಿಯಿಂದ ಹಿಡಿದು ಸ್ಟೇಶನ್ ಕೂಲಿಯ ವರೆಗಿನ ಎಲ್ಲಾ ಉದ್ಯೋಗಗಳನ್ನು ಒಂದು ಪಾರಕ್ಕೆ ಮಿಕ್ಕದಂತೆ ಅನುಭವಿಸಿದೆ. ಈ ಹುಚ್ಚು ನಾಯಿಯ ಅಲೆದಾಟದಲ್ಲಿ, ಒಂದು ಬಾರಿ, ಉತ್ತರ ಹಿಂದುಸ್ತಾನದ ಒಂದು ಮೂಲೆಯ ಮುರುಕು ಪೇಟೆಯೊಂದರಲ್ಲಿ, ಒಂದು ಕ್ಷುದ್ರ ಹೋಟೆಲಲ್ಲಿ, ಮೂರುಕಾಲ ಸಿಂಹಾಸನವೊಂದರಲ್ಲಿ ವಿರಾಜಮಾನನಾಗಿ, ಚಾಯಾಮೃತವನ್ನು ಗುಟುಕಿಸುತ್ತಾ ಇದ್ದೆ. ಹೋಟೆಲಿನ ಯಜಮಾನ ಪುರಾತನವಾದ ಮೇಜಿನ ಹಿಂದೆ ಕುಕ್ಕರಿಸಿ, ಏನೋ ಪತ್ರಿಕೆ ಮೆಲುಕು ಹಾಕುತ್ತಾ ಇದ್ದ.

ಆಕಳಿಸುತ್ತಾ, ಕಣ್ಣು ತಿರುಗಿಸಿ ನೋಡಿದಾಗ ಪತ್ರಿಕೆ ಕನ್ನಡದ್ದೆಂದು ಗೊತ್ತಾಯಿತು. "ಕ್ಯಾರೇ ಸೂವರ್, ಗದ್ಧೇಕಾಬಚ್ಚಾ" ಎಂತೀ ಹಿಂದುಸ್ತಾನೀ ಗೊಂಡಾರಣ್ಯದಲ್ಲೂ, ಕನ್ನಡದ್ದೊಂದು ಒಸರಿದೆಯೇ ಎಂದುಕೊಂಡು ನೆಗೆದು, ಹಾರಿ, ವಿಚಾರಿಸಿದೆ. ಮಾತುಕತೆಯಾಗಿ, ಹಾಟಿಲಾಧೀಶ ಕನ್ನಡಿಗನೆಂದು ತಿಳಿದು ಬಂತು. ಪತ್ರಿಕೆಯನ್ನು ನಾನೂ ಆತುರದಿಂದ ಗಬಳಿಸಿದೆ. ಕನ್ನಡದ ಅಕ್ಷರ ಕಾಣದೆ ತಿಂಗಳು ಮೂರಾದುವರಿಂದ, ಅಕ್ಷರ ಶತ್ರುವಾದ ನನಗೂ ಕನ್ನಡದ ಹಸಿವು ಹುಟ್ಟಿತು. ನಾನು ರಭಸದಿಂದ ಪತ್ರಿಕೆಯನ್ನು ನುಂಗುತ್ತಿರೋವಾಗ, ಆತನೂ, ಎಡೆಬಿಡದೆ, ಕನ್ನಡ ಮಾತಿನ ಮಳೆಸುರಿಸುತ್ತಿದ್ದ. ಒಮ್ಮೆಲೆ, ತನ್ನ ಬೆರಳಿಂದ ಒಂದು ಪ್ರಕಟಣೆಯನ್ನು ತೋರಿಸಿ, "ಅದು ನನಗಾಗಿದ್ದಿದ್ದರೆ!" ಎಂದ.

ಪ್ರಕಟಣೆಯ ಕಡೆಗೆ ಕಣ್ಣುಹಾಯಿಸಿದೆ. ನೋಡಿ, ಕಣ್ಣು ಅರಳಿಸಿದೆ. ಅದು, ನನಗೆ, ನನ್ನ ಅಪ್ಪ–ಅಮ್ಮಂದಿರಿಂದ ಕರೆ (ಜಾಹೀರಾತು): "ಮಗೂ, ದೇವ, ಬೇಗನೇ ಹಿಂದೆಬಾ. ಪರೀಕ್ಷೆಯ ಸೊಲ್ಲು ಜನ್ಮ ಜನ್ಮಕ್ಕೂ ಎತ್ತುವುದಿಲ್ಲ. ನೀನಿಲ್ಲದೆ, ಬಹಳ ವ್ಯಥೆಯಲ್ಲಿದ್ದೇವೆ" ಎಂದು. ನಾನು ನಕ್ಕು, ಅವನ ಕಡೆಗೆ ತಿರುಗಿ, ಎಲ್ಲಾ ಇತಿಹಾಸ ತಿಳಿಸಿದೆ. ಪಂಜರದ ಹಕ್ಕಿಗೆ, ಆಕಾಶದ ರುಚಿ ತಿಳಿದ ನಂತರ, ಎಷ್ಟು ಅತ್ತು ಕರೆದರೂ, ಗೂಡಿಗೆ ಮರಳಿ ಬಂದೀತೆ?' ಎಂದೆ. ಕಣ್ಣು ಕಾಣದ ಪರಊರಲ್ಲಿ, ನಮ್ಮ ಮಾತು ಆಡುವವರೊಡನೆ ಬಂಧು ಭಾವ, ಹೇಳದೇಕೇಳದೇ, ಹುಟ್ಟುತ್ತದೆ.

"ನನಗೆ ಇಂಥ ಕರೆ ಬಂದಿದ್ದರೆ!" ಎಂದು ಆತ ಉಸ್ಸಪ್ಪ ಎಂದು ನಿಟ್ಟುಸಿರು ಬಿಟ್ಟು, ಭಾವನಾಲೋಕದ ಆಂದರೆ, ಮಾಡಿನ ಸೂರಿನ ಕಡೆಗೆ ಮೂಗು ತಿರುವಿದ.

"ಅರೆ! ಹೋಗಬಾರದೆ ಊರಿಗೆ? ನಿಮ್ಮನ್ನೇನು ಗಡೀಪಾರು ಮಾಡಿದ್ದಾರೆಯೇ? ಬಹಿಷ್ಕಾರ ಹಾಕಿದ್ದಾರೆಯೇ? ಇಲ್ಲ ಕೊಲೆ-ಕಳವು ಮಾಡಿದ್ದೀರೆನು?" ಎಂದು ತುಸು ಮುದುಕಿನಲ್ಲೇ ಅಂದೆ. ಮನೆಯಿಂದ ಓಡಿ, ದೇಶಾವರ ಮಾಡುವ ತಿರುಗೂಳಿಗೆ ಮನೇಕಡೆ ಕತ್ತುಚಾಚಿ, ನಿಟ್ಟುಸಿರು ಬಿಡುವ ಬಡ ಚಾತಕ ಪಕ್ಷಿಗಳನ್ನು ಕಂಡರೆ ಇಲ್ಲದ ಸಿಟ್ಟು.

"ಹೋಗಲಾರೆ. ಹೀಗೆ ಹೋಗಲಿ? ನಾನು ಎಂದೋ ಸತ್ತುಹೋದೆ." ಅಂದ, ಆ ಮಹಾರಾಯ.

ನನಗೆ ಒಂದಿಷ್ಟು ದಿಗಿಲಾಯಿತು. ಭೂತಪ್ರೇತಗಳಲ್ಲೇನೋ ವಿಶ್ವಾಸ ನನಗಿಲ್ಲ ಅನ್ನಿ. ಆದರೆ ಹುಚ್ಚರ ಸಹವಾಸ ಯಾರಿಗೆ ಬೇಕಾಗಿದೆ? ಎಂದು ಒಂದಿಷ್ಟು ಶಂಕೆಯಾಯಿತು.

ಆದರೂ, ದಿಗಿಲೂ ತೋರಿಸಿಕೊಳ್ಳದೆ: "ಏನು ಸ್ವಾಮಿ? ಕನವರಿಸುತ್ತಿದ್ದೀರಾ?" ಎಂದು ವಿಚಾರಿಸಿದೆ.

ಮನುಷ್ಯನ ಮೂರ್ತಿ ಪುನಃ ಭಾವನಾಲೋಕದ ಅಂದರೆ ಮಾಡಿನ ಸೂರಿನ ಕಡೆಗೆ ತಿರುಗಿತು. ಕನಸು ಕಾಣುವವನಂತೆ ತೋರಿದ. ಮತ್ತೆ, ಉದ್ದವಾಗಿ ಉಸಿರು ಎಳೆದು. "ಸತ್ತು ಹೋದಮೇಲೆ, ಊರಿಗೆ ಹೋದರೆ, ಹೆಂಡತಿ ಮಕ್ಕಳಿಗೆ ಉಭಯ ಸಂಕಟ" ಅಂದ.

"ಅರೆ! ಒಳ್ಳೇ ಒಗಟಿನೊಳಗೊಂದು ಒಗಟಿನಂತಾಯಿತಲ್ಲ!" ಎಂದುಕೊಂಡು ಮುಖವನ್ನೆಲ್ಲಾ ಒಂದು ಪ್ರಶ್ನಾರ್ಥಕ ಚಿಹ್ನೆಯಾಗಿ ಮಾಡಿ, ಅವನ ಕಡೆಗೆ ಕಣ್ಣರಳಿಸಿದೆ.

"ಈ ಜೀವಮಾನದಲ್ಲಿ ಊರವರನ್ನು ಹಣೆಯಲ್ಲಿ ಬರೆದಿದೆಯೋ ಇಲ್ಲವೊ? ಈಗೊಮ್ಮೆಗೆ ಊರವರೊಬ್ಬರು ನೀವು ಅವತರಿಸಿದ್ದೀರಿ. ಇನ್ನು ಎಲ್ಲೋ! ಯಾರೋ? ನನ್ನ ರಾಮಾಯಣ ತೋಡಿಕೊಂಡು, ಸ್ವಲ್ಪ ಎದೆ ಹಗುರ ಮಾಡಿಕೊಳ್ಳುತ್ತೇನೆ.

"ನೋಡಿ ಸ್ವಾಮಿ; ನಾನೂ ಊರಲ್ಲಿ ಸಾಕಷ್ಟು ಮರ್ಯಾದಸ್ಥ, ಸಂಭಾವಿತನಾಗಿಯೇ ಇದ್ದೆ. ಅಂದರೆ ಬ್ಯಾಂಕಿನಲ್ಲಿ ಗುಮಾಸ್ತೆ.—ದಿ ಬೋಗಸ್ ಬ್ಯಾಂಕ್ ಗೊತ್ತಿಲ್ಲವೇ, ಇಂಗ್ಲಿಷ್ ಜನರ ಸುಸ್ಥಿ, ನನ್ನ ಹೆಂಡತಿ ಒಳ್ಳೇ ಚಲುವೆ. ಕಲಿತವಳು, ಬಂಗಾರದಂಥವಳು. ಪುತ್ಥಳಿ ಚಿನ್ನ. ಪುನಃ ಕಣ್ಣಾಲಿಗಳು ಮಾಡಿನ ಸೂರಿನ ಕಡೆಗೆ ಚಲಿಸತೊಡಗಿದುವು ಇಬ್ಬರು ಮುದ್ದಾದ, ಜಿಂಕೇ ಮರಿಗಳಂಥಾ ಮುದ್ದು ಮಕ್ಕಳು. ಸಂಸಾರನೇನೋ ಬಲು ಸುಂದರಾನೇ. ಚಕೋರ ಪಕ್ಷಿಗಳ ಪ್ರೇಮ; ವಗೈರೆ ಇತ್ಯಾದಿ. ಆದರೆ ಸಂಬಳ-ಉತ್ಪನ್ನ ಅನ್ನೋದು— ಸ್ವಾಮಿ, ಬಹಳ ಹರ ಹರ. ನಾನು ಇಂಥಾ ಕಲಿತ, ಚೆಂದುಳ್ಳ ಚಲುವೇನ ಮದುವೆಯಾಗಿ ಇಬ್ಬರು ಮಗು ಮಾಣಿಕ್ಯರನ್ನು ಉತ್ಪನ್ನಮಾಡಿಯೂ ಈ ಸುಂದರೀ ರತ್ನಕ್ಕೆ, ಒಂದು ಅಲಂಕಾರದ ಸೀರೆಗೂ ಗತಿಯಿಲ್ಲದಂತೇ ಆಯಿತಲ್ಲಾ ಎಂದು. ನಾನು ತುಂಬಾ ಕೊರಗುತ್ತಿದ್ದೆ. ಅವಳೋ ಮುತ್ತಿನಂಥಾ ಹುಡುಗಿ. ಏನು ಪ್ರೀತಿ, ಏನು ಸಹನೆ: ಏನು ನಾಜೂಕು! ಸಾಕ್ಷಾತ್ತು ಸಾವಿತ್ರಿ. ಅವಳಂಥಾ ಅಪ್ಸರೆಯನ್ನ ಮದುವೆಯಾಗಿ ಅವಳ ಭಕ್ತಿ ಪ್ರೇಮಗಳನ್ನೆಲ್ಲಾ ಪಡೆದೂ—ಒಂದು ನಾಜೂಕಾದ ಸೀರೆಯನ್ನಾಗಲಿ ಒಂದು ಜತೆ ಥಳಥಳಿಸುವ ಬೆಂಡೋಲೆಯನ್ನಾಗಲಿ! ಈ ದೇವಿಯ ಮೇಲೆ ಮುಡಿಪಿಡುವ ಸಾಮರ್ಥ್ಯವಿಲ್ಲವಲ್ಲಾ ನನ್ನಲ್ಲಿ ಎಂದು ಮನಸ್ಸು ಕುದಿಯುತ್ತಿತ್ತು.

ಆಫೀಸಿನಲ್ಲಿ ಸಾಹೇಬರಿಗೆ ಅನೇಕ ಬಾರಿ ಗೋಳಿಟ್ಟೆ. ಅವರನ್ನು ಕಂಡಾಗಲೆಲ್ಲಾ ಭಯಭಕ್ತಿಯಿಂದ ಸಲಾಮು ಮಾಡುತ್ತಿದ್ದೆ. ಆಫೀಸಿಗೆ ಎಲ್ಲರಿಂದಲೂ ೧೦ ನಿಮಿಷ ಮುಂದಾಗಿ ಬಂದು, ಎಲ್ಲರಿಂದಲೂ ೧೦ ನಿಮಿಷ ತಡವಾಗಿ ಹೋಗುತ್ತಿದ್ದೆ. ಸಾಹೇಬರು ಕಾರಲ್ಲಿ ಕೂತ ನಂತರ, ನಾನೇ ವಿನಯದಿಂದ ಬಾಗಿಲು ಮುಚ್ಚಿ, ಬೇಕಿದ್ದರೆ ಸಾಹೇಬರ ಮನೆಗೆ, ಬಾಜಾರಿನಿಂದ ತರಕಾರಿ ಸರಬರಾಯಿ ಇತ್ಯಾದಿ ಮಾಡುತ್ತ ಇದ್ದೆ. ಆದರೆ, ಎಷ್ಟು ತಪಸ್ಸು ಮಾಡಿದ್ರೂ ನೂವೇ, ಭದ್ರಿದೇವತೆ ಒಲಿಯಲೇ ಇಲ್ಲ. ಮನೆಯಲ್ಲಿ ಅವಳ ಮುಖಾ ನೋಡಿಯಂತೂ ಬೆಂಕಿಯೇಳುತ್ತಿತ್ತು. ಅದೇ ಕರ್ಮಕ್ಕೆ, ಅವಳ "ಸಹಪಾಠಿನಿ"ಯೊಬ್ಬಳು ಒಂದು ದಿನ ಕಾರಿನಲ್ಲಿ ಸವಾರಿ ಮಾಡುತ್ತಿರಬೇಕೆ?—ಮುನಿಸಿಪಲ್ ಕಮಿಶನರನ್ನು ವರಿಸಿರೋ ಪುಣ್ಯಾತ್ಮಗಿತ್ತಿ. ಇನ್ನೊಂದು ಬಾರಿ, ಯಾವ ಹಾಳುಗಳಿಗೆಯಲ್ಲೋ, ನನ್ನಾಕೆ, ಮಾರ್ಕೇಟಿನಿಂದ, ಚೀಲದಲ್ಲಿಷ್ಟು ಹರಿವೇ ಸೊಪ್ಪು, ಕಾಯಿಪಲ್ಲೆ, ತರುತ್ತ ನಮ್ಮ ಸಿಂಬಳ–ಶೋಭಿತ ಪುತ್ರ ರತ್ನನ್ನ ಹೊರುತ್ತಾ ಇರೋ ಕಾಲಕ್ಕೇ ಇನ್ನೊಬ್ಬಳು, ಇವಳನ್ನು ಕಂಡು, "ಹಲ್ಲೋ! ಹಲ್ಲೋ!" ಎಂದು ಹಲ್ಲು ಕಿರಿದು ಮಾಯವಾಗಬೇಕೆ? ಬೋಗಸ್ ಬ್ಯಾಂಕಿನ ಬಡ ಚಿತ್ರಗುಪ್ತನನ್ನು ಕೈಹಿಡಿದು ಕೆಸರಲ್ಲಿ ರತ್ನಬಿದ್ದಂತಾಯಿತಲ್ಲಾ ಎಂದು ಅವಳ ಮನಸ್ಸಿನಲ್ಲೂ ಕಡಿಯುತ್ತಿತ್ತೆಂದು ನನಗೂ ತಿಳಿಯುತ್ತಿತ್ತು. ಈ ಯಾತನೆಯಲ್ಲೂ ನನ್ನ ಕರ್ತವ್ಯವೊಂದನ್ನು ಮರೆಯದೆ,—ನನ್ನ ಕೋಟು ಶರಾಯಿ, ಧೋಬಿಗೆ ಸಮರ್ಪಿಸೋದನ್ನ ನಿಲ್ಲಿಸಿ, ಮಧ್ಯಾಹ್ನ ಹೊತ್ತಿನ ಆಫೀಸ್–ಕಾಫಿಯನ್ನು ವರ್ಜಿಸಿ, ಹೇಗೂ ಹಾಗೂ ಕಷ್ಟದಿಂದ, ಒಂದು ಹತ್ತು ಸಾವಿರದ ಇನ್ಶೂರೆನ್ಸ್‌ಗೆ ಪ್ರೀಮಿಯಂ, ಹಲ್ಲು ಕಚ್ಚಿ ತೆರುತ್ತಿದ್ದೆ. ಆದರೆ ಬದುಕು ಮಾತ್ರ ಅಸಹ್ಯವಾಯಿತು. ದಾರಿದ್ರ್ಯ ತಾಳಲಿಕ್ಕಾಗಲಿಲ್ಲ.

ಸಾಕಷ್ಟು ಮತಿಮಂಥನ ಮಾಡಿದೆ. ಆಗಾಗ್ಗೆ ಚಕ್ರಬಂಧ ಸ್ಪರ್ಧೆಗೆ, ಮೂರು ಮೂರು ರೂಪಾಯಿ ಕೃಷ್ಣಾರ್ಪಣರೂಮಾಡಿದೆ. ಕೊನೆಗೆ ಆಫೀಸರರಿಗೆ ತಪಸ್ಸು ಮಾಡುವುದು ವ್ಯರ್ಥವೆಂದು ಖಚಿತವಾಗಿ, ಹಲ್ಲುಕಚ್ಚಿ, ಎದೆಕಲ್ಲು ಮಾಡಿ, ಒಂದು ಭೀಷಣ ಕೃತ್ಯವನ್ನು ಮಾಡಿದೆ......

ಒಂದು ನಿಮಿಷ, ದಂಗು ಬಡಿದಂತೆ ನನ್ನನ್ನೇ ನೋಡಿದ. ನಾನು ಬಹಳ ಉತ್ಸಾಹದಿಂದ ಬಾಯಿ ಹಾಕಿ: "ಹೋ!...ಆ ಹೆಂಡತೀನ್ನ ಭಾವಿಗೆ ದೂಡಿದಿರೇನು?......... ನಾನೂನೂ ಹಾಗೇನೇ ಮಾಡುವ.........

"ಛೀ! ಛೀ! ಛೀ! ಶಾಂತಂ ಪಾಪಂ! ಆ ಮುದ್ದಿನರಗಿಣೀನ!; ಆ ಪುತ್ಥಳಿ ಭಂಗಾರಾನ! ಆ ಚಿನ್ನದ ಗೊಂಬೀನ! ಆ ಸಾಕ್ಷಾತ್ತು ಸಾವಿತ್ರೀ ದೇವೀನ! ನನ್ನ ಪ್ರೇಮದ ಆಳ ನಿಮಗೇನು ಗೊತ್ತು? ಕಣ್ಣಾಲಿಗಳು ಮಾಡಿನ ಸೂರಿನತ್ತ ಜಾರಿದವು ಹಾಗಲ್ಲ. ಸಾಹಸ ಮಾಡಿ, ದೇವರನ್ನು ಸ್ಮರಿಸಿ ಎದೆಗಾರಿಕೆಯಿಂದ,—ಬ್ಯಾಂಕಿನಿಂದ ಹತ್ತು ಸಾವಿರ ರೂಪಾಯಿ ಕದ್ದೆ."

ಹಠಾತ್ತಾಗಿ ನನ್ನ ಕೈಗಳು, ನನ್ನ ಜೇಬಿನೆಡೆ ಸರಿದವು. ಮೂರೂ ಕಡೆ ಸಾಶಂಕ ದೃಷ್ಟಿ ಹಾಯಿಸಿದೆ.

"ಅಯ್ಯೋ! ದಿಗಿಲಾಯಿತೆ? ನಾನೇನೂ ಕಳ್ಳಕದಿಮನಲ್ಲ ಸ್ವಾಮಿ! ಹುಟ್ಟಿದ ನಂತರ ಇನ್ನು ಮರಣದ ತನಕ, ಇದು ಮೊದಲನೇ ಮತ್ತು ಕೊನೇ ಪಾಪಕೃತ್ಯ. ಈಗಲಂತೂ ಹೆಂಡತಿ–ಮಕ್ಕಳೂ ಇಲ್ಲ. ಜೀವನದಲ್ಲಿ ಅಭಿಲಾಷೇನೂ ಇಲ್ಲ. ಸಂಸಾರ ಇಲ್ಲದ ಗೋಸಾಯಿ ಯಾರನ್ನು ದೋಚಿ ಏನು ಮಾಡಲಿ?"

ಧೈರ್ಯ ಹುಟ್ಟಿದೊಡನೇ, ನನ್ನ ಸಮತಾವಾದವೂ ಹೊರಹೊಮ್ಮಿತು. "ಅದೆಲ್ಲಿಯ ಪಾಪಕೃತ್ಯರೀ? ಛೆ! ಪಾಪ–ಪುಣ್ಯ ಇವೆಲ್ಲಾ ಭಂಡವಾಳಶಾಹಿ ಕಟ್ಟಿದ ಸುಳ್ಳು ಕಂತೆ.— ನಮ್ಮನ್ನೆಲ್ಲಾ ಮೋಸಹೋಗಿಸಲು. ಸಂಪತ್ತು ಅಂಬೋದು, ದುಡಿಯೋ ಗುಮಾಸ್ತೆಗಳದೇ ಹೊರತು, ಈಜೀಚೇರಿನಲ್ಲಿ ಬಿದ್ದು ತಿಂದು ತೇಗೋ ಡಾಯರೆಕ್ಟರರದಲ್ಲ.---ನೀವಾದರೆ ನಿಜವಾದ ಕ್ರಾಂತಿಕಾರ, ಸಮತಾವಾದಿ. ಭಂಡವಾಳಗಾರರನ್ನು ದೋಚ.ವದು ಪುಣ್ಯ ಕಾರ್ಯ– ಆದಕ್ಕಾಗಿಯೇ ಈ ಹಾಳು ಸಮಾಜ ನಿಮ್ಮನ್ನು ಹೊರಗಟ್ಟಿದೆ.

"ಹೊರಗಟ್ಟಿದೆ? ಎಲ್ಲಿಂದ ಬಂತು? ನಾನು ಕದ್ದುದೆಂದು ಯಾರಿಗೂ ತಿಳಿದರೆ ತಾನೆ?.. ಆದರೆ ವಿವೇಕ ಎಂಬುದು ತಡವಾಗಿಯೇ ಬರೋ ಬಾಬತು. ಆಗ ಒಮ್ಮೆಗೆ ನನಗೆ ಭಯದ ಭೂತ ಹಿಡಿದು ಬಿಟ್ಟಿತು. ಹಣವನ್ನೇನೋ ಹೆಂಡತಿ ಕೈಲಿ ಒಪ್ಪಿಸಿದೆ. ಆದರೆ ಜೀವ ಮಾತ್ರ ಅಸಹ್ಯವಾಯಿತು. ಬೀದಿಯಲ್ಲಿಯೇ ಪೋಲೀಸರೆಲ್ಲರೂ ನನ್ನನ್ನೇ ದುರುಗುಟ್ಟಿ ನೋಡುತ್ತಿರುವಂತೆಯೂ ಮನೆಯ ಸುತ್ತಲೆಲ್ಲ ಪತ್ತೆದಾರಿಗಳ ಕಪ್ಪು ನೆರಳು ಹಾದಂತೆಯೂ ಮನೆಯ ಮೂಲೆ ಮೂಲೆಯಲ್ಲಿಯೂ ಒಬ್ಬೊಬ್ಬ ಸಿ. ಐ. ಡಿ. ಯಮದೂತ ಅವಿತಿದ್ದಂತೆಯೂ ಹಗಲು ರಾತ್ರಿ ನನಗೆ ಕಾಣತೊಡಗಿತು ಮಹಾರಾಯರೆ. ಸಾಹೇಬರೂ ಇತರ ಮನೆಗಳೂ ನನ್ನನ್ನು ವ್ಯಂಗವಾಗಿ ಹದ್ದುಗಣ್ಣಿನಿಂದ ನೋಡುತ್ತಿದ್ದಂತೆಯೂ ಭಾಸವಾಯಿತು. ಸಾಹೇಬರು; "ಏನೋ" ಅಂದಾಗಲೆಲ್ಲಾ ಮಾವನ ಮನೆಗೆ ಹೊರಡಲು ಸಜ್ಜಾಗಿದ್ದೀಯಾ? ಎಂಬಂತೆ ಕೇಳುತ್ತಿತ್ತು. ರಾತ್ರಿಯ ನರಕ ಕೇಳಿಬೇಡಿ ಸ್ವಾಮಿ. ಪೋಲೀಸು, ಜೇಡಿ, ಫಾಶೀ ಕಂಭಗಳದೇ ಕನಸು. ನನಗೆ ತಡೆಯಲಾಗಲಿಲ್ಲ. ಅನ್ನರುಚಿಸುವದಂತೂ ಬಿಡಿ ಸ್ವಾಮಿ. ಉಸಿರಾಡಲೂ ಕಷ್ಟವೇ ಆಗುತ್ತಿತ್ತು. ಜೀವನವೇ ರೌರವ ನರಕ ಅಂತಾರಲ್ಲಾ ಹಾಗಾಯಿತು. ತಡೆಯಲಾರದೆ ಒಂದು ದಿನ ತಲೆ ತಪ್ಪಿಸಿ ಹೆಂಡತಿಗೂ ಹೇಳದೆ ರೈಲು ಹತ್ತಿ ಪರಾರಿಯಾದೆ. ಒಂದು ತಿಂಗಳ ತನಕ ಯಾವ ಪತ್ರಿಕೆಯನ್ನು ನೋಡುವ ಸಾಹಸ ಆಗಲಿಲ್ಲ. ಕೊನೆಗೆ ಒಂದು ದಿನ ಎದೆಗಟ್ಟಿಮಾಡಿ, ಪತ್ರಿಕೆಯೊಂದನ್ನು ನೋಡಿದೆ. ಎಲ್ಲೋ ಕ್ಷೌರಿಕನ ಅಂಗಡಿಯಲ್ಲಿ ಬಿದ್ದು ನರಳುತ್ತಿದ್ದ ಪುರಾತನ ಪತ್ರಿಕೆಯ ಜರ್ಜರ ಕಳೇಬರ ಆಕಸ್ಮಾತ್ತಾಗಿ ಕಂಡಿತು. ನಮ್ಮೂರಿನ ಸುದ್ದಿ: ದಿ ಬೋಗಸ್ ಬ್ಯಾಂಕಿನಲ್ಲಿ ಹಿಂದೆ ತಿಳಿಸಿದ ಕಳವಿನ ಸಂಬಂಧದಲ್ಲಿ ಸದರೀ ಬ್ಯಾಂಕಿನ ಜವಾನ ಕರಿಯಪ್ಪನನ್ನು ಸೆಶೆನ್ಸ್ ಜಡ್ಜಿಗಳು ಅಪರಾಧಿಯಾಗಿ ನಿರ್ಣಯಿಸಿ, ಒಂದು ವರ್ಷದ ಮಟ್ಟಿಗೆ ಜೇಲಿಗೆ ಕಳಿಸಿದ್ದಾರೆ' ಎಂದು. ಕರಿಯಪ್ಪ ದೊಡ್ಡ ಕೊಡೆಯ. ನೋಡಲು ಸ್ವಲ್ಪ ಭೀಷಣಾಕಾರ. ಯಾರಿಗೂ ಬಗ್ಗುವ ಮಗನಲ್ಲ. ಸಾಹೇಬರಿಗೇ ನೆಟ್ಟಗೆ ನಿಂತು, ತಲೆಬಾಗಿಸದೆ, ಸಲಾಮು ಮಾಡುತ್ತಿದ್ದ. ಎಂದಿಗೂ ಸಾಹೇಬರ ಅಮ್ಮಾವ್ರ 'ಬೇಬಿ' ಯನ್ನು ಗಾಳಿ ಸೇವನೆಗೆ ಹೆಗಲೇರಿಸಿಕೊಂಡು ಹೋದದ್ದಾಗಲೀ ತರಕಾರಿಯ ಬಿಟ್ಟೀ ಸರಬರಾಯಿ ಮಾಡಿದ್ದಾಗಲೀ ಇಲ್ಲ. ಸಾಹೇಬರು ಅವನನ್ನು ದೊಡ್ಡ ಅಹಂಕಾರದ ಕೊಣಪನೆನ್ನುತ್ತಿದ್ದರು. ಸರಿ, ದರೋಡೆ ಮಾಡುವ ಎದೆಗಾರಿಕೆ ಇವನಿಗಲ್ಲದೆ, ಮತ್ತಾರಿಗಿದ್ದೀತು ಎಂದೀ ತರ್ಕ.

"ನೀವು ತಪ್ಪಿಸಿಕೊಂಡಿರಾ?" ಎಂದೆ. "ಅಲ್ಲವೆ, ಮತ್ತೆ. ನಾನು ಎಂಥಾ ಬೆಪ್ಪುತಕ್ಕಡಿಯೆನ್ನುತ್ತೀರಿ? ಸುಮ್ಮನೆ ಹೆದರಿ ಎದೆ ನಡುಗಿ ಅನ್ಯಾಯನಾಗಿ, ಪಲಾಯನ ಮಾಡಿದೆ.—ಅಲ್ಲವಾದರೆ—ನನ್ನಂಥಾ ಸಂಭಾವಿತ, ಸಾಹೇಬರ ವಿನೀತಭಕ್ತ, ಒಳ್ಳೇ ಮನುಷ್ಯ, ಇಂಥಾ ದುಷ್ಕೃತ್ಯ ಎಂದೂ ಮಾಡಿಯಾನೇ? ಇಲ್ಲವೆಂದೇ ಸಿದ್ಧಾಂತವಲ್ಲವೇ? ಆದರೆ, ನೋಡಿ, ನಾನೋ ಸುಮ್ಮನೆ, ಅಂಜಿ, ಮನೆಕಳೆದುಕೊಂಡು, ಹುಚ್ಚು ಕೆಲಸ ಮಾಡಿದೆ

"ಅದಕ್ಕೇ ಅನ್ನೋದು ನೋಡಿ ಕಿಸ್ಮತ್" ಎಂದು. ಸುಖವಾಗಿ ಮನೆಕಡೆಗೆ ನಡೆದು ಸುಖವಾಗಿ ಗುಬ್ಬಚ್ಚಿಗಳಂಥಾ ಸಂಸಾರ.. "ನಾನು "ಅದಕ್ಕೇನೇ 'ಕಿಸ್ಮತ್' ಅನ್ನೋದು ಸ್ವಾಮಿ ಸರಿಯಾಗಿ ಹೇಳಿದಿರಿ. ಏನು ಮಾಡಲಿ! ಮನುಷ್ಯರದು ಏನು ನಡೆದೀತು?.... ಆ ಪತ್ರಿಕೆಯ ಎರಡನೇ ಪೇಜು ನೋಡಿದೆ. ಒಂದು ಮೂಲೆಯಲ್ಲಿ "ದುರ್ಮರಣ"ಗಳ ಮಂಗಲ ಸಾಲಿನಲ್ಲಿ, ನಮ್ಮೂರಿನ ಹೊಳೆಯಲ್ಲಿ, ನೀರು ಕಂಡಿದು, ನಾಲ್ಕು ದಿನ ಕೊಳೆತ, ಹೆಣ ಒಂದು ಸಿಕ್ಕಿತೆಂದೂ ಅದು, ಅದೇ ಊರಿನ ದಿ ಬೋಗಸ್ ಬ್ಯಾಂಕಿನ 'ಶಾಣೆ'ಯಾಗಿದ್ದ ಕ್ಲಾರ್ಕನ ಹೆಣವೆಂದು ಗುರ್ತಿಸಲ್ಪಟ್ಟು ಪಂಚನಾಮೆ ಯಥಾಪ್ರಕಾರ ಜರಗಿತೆಂದೂ ಓದಿದೆ. ಓದಿ, ಥೂ! ಮಂಕರಿರಾ! ಎಂದುಕೊಂಡು, ಹೊಟ್ಟೆತುಂಬಾ ನಕ್ಕೆ. ಮರು ದಿನ ಊರ ಕಡೆಗೆ ಹೊರಟೆ.

"ಉತ್ಸಾಹವೇನೋ ಇತ್ತು. ಕುಣಿದಾಡುತ್ತಿದೆ. ಆದರೆ ಕಿಸೆಯಲ್ಲಿ ಕಾಸು ನಾಸ್ತಿ, ಕೆಲವು ಕಡೆ ನಡೆದೆ, ರೈಲಿನಲ್ಲಿ ನುಸುಳಿದೆ ಹೊರದಬ್ಬಲ್ಪಟ್ಟೆ. ಕೆಲವು ಕಡೆ ಸಣ್ಣಪುಟ್ಟ ಚಾಕರಿ ಹಿಡಿದೆ ಹಾಗೂ ಹೀಗೂ, ಮೂರು ತಿಂಗಳಲ್ಲಿ ಮನೆ ಕಡೆಗೆ ಮುಟ್ಟಿದೆ.

ಊರಿಗೆ ಹೋದವನೇ, ಯಾವ ಕಡೆಗೂ ಕಣ್ಣು ಹಾಯಿಸದೆ, ಮನೆಗೆ ಧಾವಿಸಿದೆ. ಮನೆಯೊಳಗೆ ನುಗ್ಗಿದೆ. ನನ್ನಾಕೆಗೆ ದಿಗಿಲಾಗಿರಬೇಕು. ಏಕೆಂದರೆ ಹುಲುಸಾಗಿ ಗಡ್ಡ ಮೀಸೆ ಬೆಳೆದಿದ್ದುವು. ಬಟ್ಟೆ ಬರೆಗಳೂ, ಅಖಿಲ ಭಾರತದ ರೈಲು ಬಂಡಿಗಳ ಇದ್ದಲು ಚೂರ್ಣಗಳಿಂದ ಅಲಂಕೃತವಾಗಿ ರಾಜ ಭೂಷಣಗಳ ಹಾಗೇನೇ ವಿಶೇಷ ತೋರುತ್ತಿರಲಿಲ್ಲ. ಈ ಪೀತಾಂಬರಗಳ ಸಹಸ್ರ ಛಿದ್ರಗಳನ್ನು ಕಂಡು ಆಕೆ, ನನ್ನನ್ನು ಯಾರೋ ಹುಚ್ಚ ಭಿಕಾರಿ ಎಂದು ತಿಳಿದಿರಬೇಕು. ಸಮ್ಮಕ್ಕೆ ನಾಯಿಯನ್ನು ಛೂ ಬಿಡದೇ ಇದ್ದುದು ಪುಣ್ಯ.

ಐದೇ ನಿಮಿಷಗಳ ಒಳಗೆ ನನ್ನ ನಿಜಸ್ವರೂಪ ತಿಳಿದು ಆಯಿತು. ತಿಳಿದೊಡನೆ, ಇನ್ನೇನು, ನನ್ನ ತೋಳುಗಳ ಒಳಗೆ ಹಾರಿ ಬಿದ್ದು, ಮುದ್ದಿಕ್ಕಿ, ನುಂಗಿ ನನ್ನ ಎಲುಬುಗಳನ್ನೆಲ್ಲಾ ಚೂರು ಚೂರು ಮಾಡುವಳೆಂದು ನಿರೀಕ್ಷಿಸಿದ್ದೆ. ಹಾಗೇನೂ ಆಗಲಿಲ್ಲ ಸ್ವಾಮಿ! ಕಿಸ್ಮತ್ತೆನ್ನುವುದು ಅದಕ್ಕೇ. ನಾವೊಂದು ಬಗೆದರೆ ವಿಧಿಯೊಂದು... ವಗೈರೆ ಅಲ್ಲವೇ? ಗಳಗನಾಥರೆನ್ನುತ್ತಿದ್ದ ಹಾಗೆ... ಅವಳು, ತನ್ನ ತಲೇ ಮೇಲೆ ಎರಡೂ ಕೈ ಇಟ್ಟು "ಸರ್ವ ನಾಶವಾಯಿತಲ್ಲಾ" ಎಂದು ನರಳಬೇಕೇ?

ನನಗೂ ಸಿಡಿಲು ಬಡಿದಂತಾಯಿತು. ಕರಿಯಪ್ಪನನ್ನು ಜೈಲಿಗೆ ಕಳಿಸಿದ ಸುದ್ದಿ, ನನ್ನನ್ನು

-೧೬ನೆಯ ಪುಟಕ್ಕೆ

# ಹಿಂದುಸ್ತಾನ

## ಮುಂಬಯಿ

ಝೆಕೊಸ್ಲೊವಾಕಿಯಾ ಯಾಂತ್ರಿಕ ಶಿಷ್ಟ ಮಂಡಳಿಯ ಧುರೀಣರಾದ ಎಂ. ರುಜೀಸಾರ ಇವರು ಮುಂಬಯಿಯಲ್ಲಿ ಸೇರಿದ ಅ. ಭಾ. ಗಿರಣಿ ಒಡೆಯರ ಮತ್ತು ಉದ್ದಿಮೆದಾರರ ಸಭೆಯಲ್ಲಿ ಮಾತನಾಡುತ್ತ, "ಝೆಕೋಸ್ಲೋವಾಕಿಯಾದಲ್ಲಿ ಸಣ್ಣಪುಟ್ಟ ಯಂತ್ರ ಸಾಮಗ್ರಿ ಹಾಗೆಷ್ಟಿದ್ದು ದೊಡ್ಡ ದೊಡ್ಡ ಯಂತ್ರ ಸಾಮಗ್ರಿಗಳು ನಿಯಮಿತ ಪ್ರಮಾಣದಲ್ಲಿವೆ. ಆದರೂ ನಾವು ಶಕ್ತಿಮೀರಿ ನಿಮಗೆ ಸಹಾಯ ಮಾಡಿ ನಿಮ್ಮ ಉದ್ಯೋಗಾಭಿವೃದ್ಧಿಗೆ ನೆರವಾಗುವೆವು ಎಂದು ಮೊದಲಾಗಿ ಹೇಳಿದರು. ಒಂದು ಪ್ರಶ್ನೆಗೆ ಉತ್ತರ ಕೊಡುತ್ತ, ತಮ್ಮ ದೇಶದ ಉದ್ದಿಮೆಗಳೆಲ್ಲವುಗಳ ರಾಷ್ಟ್ರೀಕರಣವಾಗಿರುವದರಿಂದ ಸಂಪಿನ ಅಂಜಿಕೆ ಇಲ್ಲವೆಂದು ಹೇಳಿದರು.

ರೈತವಾರಿ ಮತ್ತು ಜಮೀನದಾರಿ ಪದ್ಧತಿಗಳನ್ನು ಅಭ್ಯಸಿಸಿ ಸಲಹೆ ಕೊಡಲು ಕಾಂಗ್ರೆಸ್ಸಿನಿಂದ ನೇಮಿಸಲ್ಪಟ್ಟ ಸಾಗುವಳಿ ಸುಧಾರಣಾ ಸಮಿತಿಯು ತಾ. ೧ ಕ್ಕೆ ಮುಂಬಯಿಗೆ ಆಗಮಿಸಿತು. ಡಾ. ಜೆ. ಸಿ. ಕುಮಾರಪ್ಪನವರು ಈ ಸಮಿತಿಯ ಧುರೀಣರಾಗಿರುವರು.

ಚಿತ್ರಮಂದಿರದಲ್ಲಿ ಸಿಗರೇಟು ಸೇದಕೂಡದೆಂಬ ನಿರ್ಬಂಧವನ್ನು ಮುರಿದದ್ದಕ್ಕಾಗಿ ಅಹಮ್ಮದಾಬಾದದಲ್ಲಿ ಎರಡು ದಿನಗಳಲ್ಲಿ ೫೦ ಜನರನ್ನು ಬಂಧಿಸಲಾಗಿದೆ.

ರಾಷ್ಟ್ರೀಯ ಕೂಲಿಕಾರ ಸಂಘವೇ ಹಿಂದೀ ಕೂಲಿಕಾರರ ಪ್ರತಿನಿಧಿಯೆಂದೂ ಅಂತರರಾಷ್ಟ್ರೀಯ ಕೂಲಿಕಾರ ಪರಿಷತ್ತಿನಲ್ಲಿ ಅದಕ್ಕೇ ಪ್ರಾತಿನಿಧ್ಯಸಲ್ಲಬೇಕೆಂದೂ ಅಂತರ್‌ರಾಷ್ಟ್ರೀಯ ಕೂಲಿಕಾರ ಪರಿಷತ್ತಿನ ಶಿಫಾರಸ ಸಮಿತಿಯು ತೀರ್ಮಾನ ಕೊಟ್ಟಿದೆಯೆಂದು ತಿಳಿಯುತ್ತದೆ.

ರಾಯಟರ ಮತ್ತು ಅಸೋಸಿಯೇಟೆಡ್ ಪ್ರೆಸ್ ಆಫ್ ಇಂಡಿಯಾದ ಉಪಪ್ರಧಾನ ವ್ಯವಸ್ಥಾಪಕರಾದ ಶ್ರೀ ಎ. ಎಸ್. ಭರತನ್‌ರ ಪುತ್ರಿ ಕು. ವಿಜಯಲಕ್ಷ್ಮಿಯ ವಿವಾಹವು ಕೊಚ್ಚೀನ ಸಂಸ್ಥಾನದ ಶ್ರೀ ಪಿ. ಆರ್. ರಾಮಕೃಷ್ಣ ಐಯ್ಯರರ ಪುತ್ರ ಶ್ರೀ ಆರ್. ಪರಮೇಶ್ವರನ್‌ರ ಕೂಡ ತಾ. ೧ ಕ್ಕೆ ಮುಂಬಯಿಯಲ್ಲಿ ನೆರವೇರಿತು. ಗವರ್ನರ ಜನರಲ್ ರಾಜಗೋಪಾಲಾಚಾರ್ಯ ಮೊದಲಾದವರು ಸಂದೇಶ ಕಳಿಸಿದ್ದರು.

ಪಶ್ಚಿಮ ಕರಾವಳಿಯಲ್ಲಿ ದೊಡ್ಡ ಬಂದರ ಒಂದನ್ನು ಅಭಿವೃದ್ಧಿಗೊಳಿಸಬೇಕೆಂದು ಹಿಂದುಸ್ತಾನ ಸರಕಾರವು ಒಂದು ತಜ್ಞ ಸಮಿತಿಯನ್ನು ನೇಮಿಸಿದ್ದಾರೆ. ಈ ಸಮಿತಿಯು ಮಾರ್ಮಗೋವಾ ಕೊಚ್ಚೀನಗಳ ನಡುವೆ ಸ್ಥಳ ಗೊತ್ತು ಮಾಡಲು ಕರ್ನಾಟಕ, ಮೈಸೂರ, ದಕ್ಷಿಣ ಕನ್ನಡ ಹಾಗು ಮಲಬಾರಗಳ ವ್ಯಾಪಾರಿ ಹಾಗು ಔದ್ಯೋಗಿಕ ಹಿತಸಂಬಂಧಗಳ ಪ್ರತಿನಿಧಿಗಳನ್ನೂ ಆಯಾ ಸರಕಾರಗಳ ಪ್ರತಿನಿಧಿಗಳನ್ನೂ ಕಂಡು ಮಾತುಕತೆ ನಡೆಸಲು ಜುಲೈ ೧೪ ಹಾಗು ೧೫ ನೇ ತಾ. ಬೆಂಗಳೂರಲ್ಲಿ ಸಭೆ ಸೇರತಕ್ಕವರಿದ್ದಾರೆ.

ಮುಂಬಯಿ ಮುನಸಿಪಾಲಟಿಯ ೯ ಸಾವಿರ ಕಸಗೂಡಿಸುವವರಲ್ಲಿ ೭ ಸಾವಿರ ಜನರು ತಾ. ೧ ರಂದು ಮುಂಜಾವಿನಿಂದ ಹೂಡಿದ್ದ ಸಂಪು ತಾ. ೩ ಕ್ಕೆ ಮುಕ್ತಾಯವಾಯಿತು.

ಜವಳಿ ಬೆಲೆಯ ನಿರ್ಧಾರ ಸಮಿತಿಯು ತನ್ನ ವರದಿಯನ್ನು ಸರಕಾರಕ್ಕೆ ಸಾದರಪಡಿಸಿದೆ. ಈ ವರದಿಯನ್ನು ಪರಿಶೀಲಿಸಿ ಕೊನೆಯ ನಿರ್ಣಯ ಕೈಕೊಳ್ಳಲು ಹಿಂದುಸ್ತಾನ ಸರಕಾರದವರು ಪ್ರಾಂತಗಳ ಔದ್ಯೋಗಿಕ ಶಾಖೆಗಳ ಮಂತ್ರಿಗಳ ಸಭೆಯನ್ನು ಜುಲೈ ೪ ನೇ ವಾರದಲ್ಲಿ ಕರೆದಿದ್ದಾರೆ. ಜವಳಿ ಬೆಲೆಯ ಬಗ್ಗೆ ಸರಕಾರದ ನಿರ್ಧಾರವು ಅಗಸ್ಟ ತಿಂಗಳಲ್ಲಿ ಹೊರಬೀಳಬಹುದೆಂದು ತಿಳಿಯುತ್ತದೆ.

## ಮದ್ರಾಸ

ಶ್ರೀ ಕೆ. ಪಿ. ಮೆನನ್ನರು ಜೂನ ತಾ. ೨೯ ರಂದು ಪತ್ರಿಕಾಕರ್ತರಿಗೆ, ನ್ಯಾಯ ಮತ್ತು ಆಡಳಿತ ಶಾಖೆಗಳನ್ನು ಬೇರ್ಪಡಿಸುವ ಯೋಜನೆಯು ಸಿದ್ಧವಾಗಿದೆಯೆಂದೂ ಇದನ್ನು ಕಾರ್ಯರೂಪದಲ್ಲಿ ತರಲು ೪ ಲಕ್ಷ ರೂ. ಗಳಿಗಿಂತ ಹೆಚ್ಚು ತಗಲಲಿಕ್ಕಿಲ್ಲವೆಂದೂ ಈ ಯೋಜನೆ ಎಂದಿನಿಂದ ಕಾರ್ಯಕಾರಿಯಾಗಬೇಕೆಂಬುದನ್ನು ಸರಕಾರವು ನಿರ್ಧರಿಸಲಿದೆಯೆಂದೂ ತಿಳಿಸಿದರು.

## ಹೊಸದಿಲ್ಲಿ

ವಾಣಿಜ್ಯ ಶಾಖೆಯಲ್ಲಿದ್ದ ಡಾ. ಟಿ. ಜಿ. ಮೆನನರು ಸಿಂಹಳದಲ್ಲಿ ಹಿಂದುಸ್ತಾನ ಸರಕಾರದ ವ್ಯಾಪಾರಿ ಕಮಿಶನರರಾಗಿ ನೇಮಕ ಹೊಂದಿರುವರಾಗಿ ತಿಳಿಯುತ್ತದೆ.

ಹಿಂದುಸ್ತಾನ ಆಸ್ಟ್ರೇಲಿಯದ ನಡುವೆ ಆದ ಒಪ್ಪಂದದಂತೆ ಹಿಂದುಸ್ತಾನಕ್ಕೆ ಆಸ್ಟ್ರೇಲಿಯ ೭ ಲಕ್ಷ ೫೦ ಸಾವಿರ ಟನ್ ಗೋದಿ ಕೊಡುವದಲ್ಲದೆ ಇನ್ನೂ ಒಂದು ಲಕ್ಷ ಹೆಚ್ಚು ಗೋದಿಯನ್ನು ಕೊಡಲಿದೆಯೆಂದು ತಿಳಿಯುತ್ತದೆ.

ಹೊಸದಿಲ್ಲಿಯ ಸೆಂಟ ಸ್ಟೀಫೆನ್ಸ ಹಾಸ್ಪಿಟಲದ ಸೆಕ್ರೆಟರಿ ಮಿಸ್ ಹೀದರ ಟರ್ನರ ಇವರು ತಮ್ಮ ಕಚೇರಿಯಲ್ಲಿ ನೌಕರರ ಸಂಬಳದ ರೂಪಾಯಿಗಳನ್ನು ಎಣಿಸುತ್ತ ಕುಳಿತಾಗ ಇಬ್ಬರು ಸ್ತ್ರೀಯರು ಹಣ ದೋಚಿಕೊಂಡರು. ಕೊನೆಗೆ ಓಡಿ ಹೋಗುವಾಗ ಸಿಕ್ಕುಬಿದ್ದರು. ಅವರನ್ನು ಶೋಧಿಸಲಾಗಿ ೬ ಸಾವಿರ ರೂ. ಗಳು ಸಿಕ್ಕವು.

ದಿಲ್ಲಿ ರೇಲ್ವೆ ಪೋಲೀಸರು ಫರೀದಾಬಾದ ರೇಲ್ವೆ ನಿಲ್ದಾಣದಲ್ಲಿ ಇಬ್ಬರ ಬಳಿಗಿದ್ದ ೧೦೦೦೦ ರೂ. ಬೆಲೆಯ ಬಟ್ಟೆಯನ್ನು ವಶಪಡಿಸಿಕೊಂಡರು ಇವರು ಪಾಕಿಸ್ತಾನಕ್ಕೆ ಕಳ್ಳತನದಿಂದ ಇದನ್ನು ಸಾಗಿಸತಕ್ಕವರಿದ್ದರು.

ಭಾರತದ ಉಪ ಮುಖ್ಯ ಮಂತ್ರಿ ಸರದಾರ ವಲ್ಲಭಭಾಯಿ ಪಟೇಲರ ಪ್ರಕೃತಿಯು ಈಗ ಸುಧಾರಿಸಿದ್ದು ೫ ನೇ ತಾ. ಸಂಜೆಗೆ ರಾಜಧಾನಿಗೆ ಆಗಮಿಸಿದ್ದಾರೆ.

ಅ. ಭಾ. ಹಿಂದೂ ಮಹಾಸಭೆಯ ಕಾರ್ಯಸಮಿತಿಯ ಸಭೆಯು ಅಗಸ್ಟ ತಿಂಗಳ ಮೊದಲವಾರದಲ್ಲಿ ಸೇರುವದೆಂದೂ ದೇಶದ ಬದಲಾದ ಪರಿಸ್ಥಿತಿಗನುಸರಿಸಿ ಮಹಾಸಭೆಯು ಧೋರಣ ವಹಿಸಬೇಕಾಗಿದೆಯೆಂದೂ ಪ್ರಕಟನೆ ಹೊರಟಿದೆ.

ದಿಲ್ಲಿಯ ರೇಲ್ವೆ ಕೂಲಿಕಾರ ಸಂಘದ ಅಧ್ಯಕ್ಷರಾದ ಮುಸ್ತಾಕ ಅಹಮ್ಮದರು ಉಪವಾಸ ಮುರಿದರು. ಪೂ. ಪಂಜಾಬ ರೇಲ್ವೆ ಅಧಿಕಾರಿಗಳು ಸಂಘದವರ ಕೆಲ ಬೇಡಿಕೆ ಮಾನ್ಯ ಮಾಡದಿದ್ದುದೇ ಇವರ ಉಪವಾಸಕ್ಕೆ ಕಾರಣವಾಗಿತ್ತು.

ಪಂ. ಜವಾಹರಲಾಲ ನೆಹರು ಅವರು ಸಾಮ್ಯವಾದೀ ಪಕ್ಷದ ಓರ್ವ ಧುರೀಣರಾದ ಶ್ರೀ ಅಚ್ಯುತ ಪಟವರ್ಧನರಿಗೆ ಒಂದು ಪ್ರಮುಖ ರಾಷ್ಟ್ರದ ರಾಯಭಾರಿತ್ವವನ್ನು ಕೊಡುವವರಿದ್ದಾರೆಂದು ತಿಳಿದು ಬರುತ್ತದೆ.

ಅ. ಭಾ. ಕಾಂ. ಕಮೀಟಿಯ ಸ್ಥಿರ ಕಾರ್ಯದರ್ಶಿಗಳಾಗಿದ್ದ ಶ್ರೀ ಸಾದಿಕ್ ಅಲಿ ಅವರು ತಮ್ಮ ಸ್ಥಳಕ್ಕೆ ರಾಜೀನಾಮೆ ಕೊಟ್ಟು ಲೋಕಸೇವಕ ಸಂಘದ ಕಾರ್ಯದರ್ಶಿಗಳಾಗಿ ರಚನಾತ್ಮಕ ಕಾರ್ಯದಲ್ಲಿ ತೊಡಗುವರೆಂದು ಅಧಿಕೃತವಾಗಿ ತಿಳಿಯುತ್ತದೆ.

ತಾ. ೧ ರಂದು ದಿಲ್ಲಿಯಲ್ಲಿ ೧೫೦ ನಿರಾಶ್ರಿತ ಸ್ತ್ರೀಯರು ನೌಕರಿ ಮತ್ತು ವಸತಿ ಸೌಕರ್ಯವನ್ನು ಬೇಡುತ್ತ ಪಂ. ನೆಹರು ಅವರ ಕಚೇರಿಯ ಎದುರಿಗೆ ಮತ ಪ್ರದರ್ಶನ ಮಾಡಿದರು.

## ಯುಕ್ತಪ್ರಾಂತ

ಸಂಯುಕ್ತಪ್ರಾಂತ ಶಾಸನ ಸಭೆಗೆ ನಡೆದ ೧೫ ಸ್ಥಳಗಳ ಉಪಚುನಾವಣೆಯಲ್ಲಿ ತಾ. ೪ ರ ವರೆಗೆ ೭ ಸ್ಥಳಗಳು ಕಾಂಗ್ರೆಸಿಗೆ ದೊರೆತ ವರದಿ ಬಂದಿದ್ದು ಇಬ್ಬರು ಸಮತಾವಾದಿಗಳು ಮತ್ತು ಒಬ್ಬ ಸ್ವತಂತ್ರ ಉಮೇದವಾರನು ಠೇವು ಕಳೆದುಕೊಂಡರು.

## ಬಿಹಾರ

ಬಿಹಾರದಲ್ಲಿ ಜಮೀನದಾರಿ ನಿರ್ಮೂಲನ ಕಾರ್ಯವು ಯೋಜನೆಯ ಪ್ರಕಾರ ಸಾಗಿದ್ದು ಸಪ್ಟಂಬರ ೧೫ ರೊಳಗಾಗಿ ಜಮೀನದಾರರ ಎಲ್ಲ ಜಮೀನುಗಳನ್ನು ಸರಕಾರವು ವಹಿಸಿಕೊಳ್ಳುವದೆಂದು ತಿಳಿಯುತ್ತದೆ.

---

ಕಳೆದ ಫೆಬ್ರುವರಿಯಿಂದ ಕಾಣೆಯಾಗಿದ್ದ ಪಶ್ಚಿಮ ಗೋದಾವರಿ ಜಿಲ್ಲೆಯ ಕಮ್ಯುನಿಸ್ಟ ಪಕ್ಷದ ಕಾರ್ಯದರ್ಶಿ ಶ್ರೀ ಗಣಪತಿ ಸತ್ಯನಾರಾಯಣ ಅವರನ್ನು ಓರ್ವ ಮುಸಲ್ಮಾನನ ಮನೆಯಲ್ಲಿ ಬಂಧಿಸಲಾಯ್ತು. ಅವರಿಗೆ ಆಸವು ಕೊಟ್ಟ ಮುಸಲ್ಮಾನನನ್ನೂ ಬಂಧಿಸಲಾಗಿದೆ. ಮುದ್ರಣಾಲಯ ಕೆಲಸಗಾರರ ಸಂಘದ ಅಧ್ಯಕ್ಷ ಶ್ರೀ ಕೆ. ಸಿಂಹಾಚಲಂರೂ ಬಂಧಿತರಾಗಿದ್ದಾರೆ,

## ಪ. ಬಂಗಾಲ

ಕಲಕತ್ತೆಯ ಒಬ್ಬ ಪ್ರಸಿದ್ಧ ವರ್ತಕನು ೫ ಲಕ್ಷ ರೂ. ವಂಚಿಸಿದ ಆರೋಪದ ಮೇಲೆ ಸೆರೆಹಿಡಿಯಲ್ಪಟ್ಟನು. ಇದೇ ಸಂಬಂಧದಲ್ಲಿ ಇನ್ನಿಬ್ಬರನ್ನೂ ಬಂಧಿಸಲಾಯ್ತು. ಈ ವರ್ತಕನು ಪೂರೈಕೆ ಖಾತೆಯಲ್ಲಿ ಸರಕಾರಿ ಏಜಂಟನಿರುವನು.

ಕಲಕತ್ತಾ ವಿಶ್ವವಿದ್ಯಾಲಯದ ಜೂನ ೧೯೪೮ ರಲ್ಲಿ ನಡೆಯಬೇಕಾಗಿದ್ದ ಎಂ. ಬಿ. ಪರೀಕ್ಷೆಯನ್ನು ಅಗಸ್ಟ ೨೩ ರಿಂದ ಪ್ರಾರಂಭಿಸಲು ಅಧಿಕಾರಿಗಳು ಒಪ್ಪಿದ್ದಾರೆಂದೂ ವಿದ್ಯಾರ್ಥಿಗಳ ಬೇಡಿಕೆಯು ಪೂರೈಸಲ್ಪಟ್ಟಿತೆಂದೂ ತಿಳಿಯುತ್ತದೆ. ಇದರಂತೆಯೇ ನವೆಂಬರದಲ್ಲಿ ನಡೆಯಬೇಕಾದ ಎಂ. ಬಿ. ಯ ೨ ನೇ ಪರೀಕ್ಷೆಯು ಡಿಸೆಂಬರದಲ್ಲಿ ಜರಗುವದು.

ಹಿಂದುಸ್ತಾನ ಸರಕಾರದವರು ಶಿವಪುರ ವನಸ್ಪತಿ ತೋಟವನ್ನು ತಮ್ಮ ಕಡೆಗೆ ತೆಗೆದುಕೊಳ್ಳಲು ನಿರ್ಧರಿಸಿದ್ದಾರೆ. ಈ ವಿಷಯ ಪ. ಬಂಗಾಲ ಸರಕಾರಕ್ಕೆ ತಿಳಿಸಿದ್ದಾಗಿದೆ.

---

## ಸ್ವಯಂಪ್ರವರ್ತಕ ಟೆಲಿಫೋನ

ಭಾರತದಲ್ಲೆಲ್ಲ ಸ್ವಯಂಪ್ರವರ್ತಕ ಟೆಲಿಫೋನ ವ್ಯವಸ್ಥೆಯು ಬರುವ ವರ್ಷದಿಂದ ಲಭ್ಯವಾಗುವದಿದೆಯೆಂದು ತಿಳಿಯುತ್ತದೆ. ಸರಕಾರದ ಕಾರಖಾನೆಯು ಆಕ್ಟೋಬರದಲ್ಲಿ ಕೆಲಸ ಪ್ರಾರಂಭಿಸುವದು. ಇಷ್ಟು ದಿನ ಜಬಲಪೂರ, ಅಲಿಪೂರ, ಮುಂಬಯಿ ಕಾರಖಾನೆಗಳಲ್ಲಿ ಇದಕ್ಕೆ ಬೇಕಾಗುವ ಎಲ್ಲ ಉಪಕರಣಗಳು ಸಿದ್ಧವಾಗುತ್ತಿರಲಿಲ್ಲ. ಹೊಸ ಸರಕಾರೀ ಕಾರಖಾನೆಯಲ್ಲಿ ಇವನ್ನೆಲ್ಲ ತಯಾರಿಸಲಾಗುವದು. ಹೊರಗಿಂದ ತರಿಸಿದ ಈ ಉಪಕರಣಗಳಿಗೆ ಮೊದಲು ೧೨೦ ರೂ. ಗಳಿದ್ದರೆ ಇಲ್ಲಿಯೇ ಸಿದ್ಧವಾದವುಗಳಿಗೆ ೯೫ ರೂ. ಗಳಷ್ಟಾಗುವದು. ಈ ಕಾರಖಾನೆಯನ್ನು ಬೆಂಗಳೂರಿನ ಹಿಂದುಸ್ತಾನ ವಿಮಾನ ಕಾರಖಾನೆಯ ಮಾದರಿಯ ಮೇಲೆ ಸಂಪರ್ಕ ಶಾಖೆಯವರೇ ವಾಣಿಜ್ಯ ತತ್ವದ ಮೇಲೆ ಸಾಗಿಸುವರು. ಸ್ಥಳ ನಿರ್ಣಯವನ್ನು ಸರಕಾರವು ಇಷ್ಟರಲ್ಲಿ ಮಾಡಲಿದೆ.

---

## ಲಾಭದಲ್ಲಿ ಕೂಲಿಕಾರರಿಗೆ ಪಾಲು

ಔದ್ಯೋಗಿಕ ಕಾರಖಾನೆಗಳ ಲಾಭದಲ್ಲಿ ಕೂಲಿಕಾರರಿಗೆ ಪಾಲು ಕೊಡಿಸುವ ಬಗ್ಗೆ ನೇಮಿಸಲಾದ ಸಮಿತಿಯು ದಿಲ್ಲಿಯಲ್ಲಿ ಜೂನ ೨೫ ರಿಂದ ೨೯ ರ ವರೆಗೆ ಸಭೆ ಸೇರಿ ಕಾರಖಾನೆಯ ಒಡೆಯರ ಮತ್ತು ಕೂಲಿಕಾರರ ಪ್ರತಿನಿಧಿಗಳ ಹೇಳಿಕೆಗಳನ್ನು ಕೇಳಿಕೊಂಡಿತು. ಇದೇ ಸಭೆಯಲ್ಲಿ ಅರ್ಥಶಾಸ್ತ್ರ ವಿಶಾರದರ ಅಭಿಪ್ರಾಯಗಳನ್ನೂ, ಸಮಿತಿಯು ಕೇಳಿಕೊಂಡಿದೆ ೧೨ ನೇ ತಾ. ಗೆ ಮತ್ತೆ ಸಭೆ ಸೇರಿ ಈ ಸಮಿತಿಯು ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಬೇಗ ತನ್ನ ವರದಿಯನ್ನು ಸರಕಾರಕ್ಕೆ ಸಾದರ ಪಡಿಸುವದೆಂದು ತಿಳಿಯುತ್ತದೆ.

---

## ಹಿಂದೀ ಟಾಯಿಪರಾಯಟರ ಸಮಿತಿ

ಹಿಂದೀ ಟಾಯಿಪರಾಯಟರ ಮತ್ತು ಲಘುಲೇಖನದ ಬಗ್ಗೆ ಘಟನಾ ಸಮಿತಿಯ ಅಧ್ಯಕ್ಷರಿಂದ ನೇಮಿಸಲ್ಪಟ್ಟ ಸಮಿತಿಯು ಈ ಬಗ್ಗೆ ವಿವರವನ್ನು ದೊರಕಿಸಲು ಒಂದು ಪ್ರಶ್ನಮಾಲಿಕೆಯನ್ನು ಸಿದ್ಧಪಡಿಸಿದೆ. ಸದ್ಯದ ಟಾಯಿಪರಾಯಟರ ಮತ್ತು ಲಘುಲೇಖನ ಪದ್ಧತಿಗಳನ್ನು ಪರಿಶೀಲಿಸಿ ಅವು ಶಕ್ಯವಿದ್ದಷ್ಟು ವೇಗದಿಂದ ಕೆಲಸಕೊಡುವಂತೆ ಯೋಜಿಸುವದು ಸಮಿತಿಯ ಉದ್ದೇಶವಾಗಿದೆ.

---

## ಟಿಕೆಟಿಲ್ಲದೆ ಪ್ರಯಾಣ
### ಒಮ್ಮೆಗೇ ೬೯೭ ಜನ ಸಿಕ್ಕರು

ಇದೇ ತಾ. ೨೦ ರಂದು ಮೇಹಸಾನಾ ಸ್ಟೇಶನ್ನಿನಲ್ಲಿ ಬರುವ ಮತ್ತು ಹೋಗುವ ದಿಲ್ಲಿ ಎಕ್ಸಪ್ರೆಸ್ ಗಾಡಿಗಳನ್ನು ಶೋಧಿಸಲಾಗಿ ೬೯೭ ಜನರು ಟಿಕೆಟಿಲ್ಲದೆ ಪ್ರವಾಸ ಮಾಡುವವರು ಸಿಕ್ಕರು. ಅವರಿಂದ ೨೨೬೩ ರೂ. ಹಣ ವಸೂಲ ಮಾಡಲಾಯಿತು. ಮತ್ತು ೧೧೪ ಜನರನ್ನು ಮ್ಯಾಜಿಸ್ಟ್ರೇಟರ ಮುಂದೆ ಒಯ್ಯಲಾಯಿತು. ಅಹಮ್ಮದಾಬಾದದಿಂದ ಹೋಗುವ ದಿಲ್ಲಿಯ ಮೇಲನ್ನು ಶೋಧಿಸಲಾಗಿ ಸುಮಾರು ೨೦ ಸಾವಿರ ರೂ. ಬೆಲೆಯ ಅಕ್ರಮವಾಗಿ ಸಾಗಿಸಿದ ಬಟ್ಟೆ ದೊರೆಯಿತು.

## ಚಿನ್ನ, ರತ್ನ, ನಾಣ್ಯಗಳ ನಿರ್ಯಾತಕ್ಕೆ ಪ್ರತಿಬಂಧ

ಹೈದರಾಬಾದ ಸಂಸ್ಥಾನಕ್ಕೆ ಹಿಂದುಸ್ತಾನದ ಯಾವದೇ ಭಾಗದಿಂದ ಬಂಗಾರ, ಆಭರಣ, ನಾಣ್ಯ ವಿದೇಶದ ಚಲನ, ಕರನ್ಸಿ ನೋಟುಗಳು ಬ್ಯಾಂಕು ನೋಟು ಮೊದಲಾದವುಗಳನ್ನು ಕಳಿಸುವದಕ್ಕೆ ಪ್ರತಿಬಂಧಹಾಕಿದೆ ಎಂದು ಹಿಂದುಸ್ತಾನದ ರಿಝರ್ವಬ್ಯಾಂಕಿನ ಪ್ರಕಟನೆಯು ಹಿಂದುಸ್ತಾನ ಸರಕಾರದ ವಿಶೇಷ ಗ್ಯಾಜಿಟನಲ್ಲಿ ತಾ. ೩ ರಂದು ಪ್ರಸಿದ್ಧವಾಗಿದೆ.

ಹೈದರಾಬಾದ ಸರಕಾರವು ೧೯೪೭ ನೇ ಡಿಸೆಂಬರ ತಿಂಗಳಲ್ಲಿ ೨ ಆರ್ಡಿನನ್ಸ ಹೊರಡಿಸಿ ಹೈದರಾಬಾದದಿಂದ ಹಿಂದುಸ್ತಾನಕ್ಕೆ ಬಂಗಾರ, ನಾಣ್ಯ ಮೊದಲಾದವನ್ನು ಕಳಿಸಲು ಪ್ರತಿಬಂಧ ಹಾಕಿದ್ದೂ ಹಿಂದುಸ್ತಾನದ ನಾಣ್ಯ ಚಲಾವಣೆಗೆ ಪ್ರತಿಬಂಧ ಹಾಕಿದ್ದೂ ಯಥಾಸ್ಥಿತಿ ಒಪ್ಪಂದವನ್ನು ಮುರಿದದ್ದರ ದ್ಯೋತಕವಾಗಿದೆ. ಈ ಬಗ್ಗೆ ಹಿಂದುಸ್ತಾನ ಸರಕಾರವು ಪ್ರತಿಭಟಿಸಿದರೂ ಹೈದರಾಬಾದವು ಈ ಎರಡೂ ಆಜ್ಞೆಗಳನ್ನು ರದ್ದುಗೊಳಿಸಲಿಲ್ಲ. ಅದ್ದರಿಂದ ಈಗ ಹಿಂದುಸ್ತಾನವೂ ಇದೇ ಬಗೆಯ ಆಜ್ಞೆ ಹೊರಡಿಸಬೇಕಾಯ್ತು. ಹಿಂದುಸ್ತಾನ ಸರಕಾರದ ಹೊಸ ಹೆಜ್ಜೆಯೆಂದರೆ ಇಂಪೀರಿಯಲ ಬ್ಯಾಂಕು ಹೈದರಾಬಾದ ಬ್ಯಾಂಕಿನ ಸಂಬಂಧ ಕಡಿದುಕೊಂಡುದು. ಇಂಪೀರಿಯಲ ಬ್ಯಾಂಕು ತಾ. ೬ ರಂದು ಒಂದು ಪ್ರಕಟನೆ ಹೊರಡಿಸಿ ತಾನು ಹೈದರಾಬಾದ ಸಂಸ್ಥಾನ ಬ್ಯಾಂಕಿನೊಡನೆ ಇಟ್ಟುಕೊಂಡ ಏಜನ್ಸಿ ವ್ಯವಸ್ಥೆಯನ್ನೆಲ್ಲ ನಿಲ್ಲಿಸಲಾಗಿದೆಂದು ಸಾರಿದೆ. ಈ ಪ್ರಕಟನೆ ಹೊರಟ ಕೂಡಲೆ ಸಂಸ್ಥಾನದಲ್ಲಿದ್ದ ಹಿಂದಿ ಅಂಚೇಕಚೇರಿಗಳು ವ್ಯವಹಾರದ ವಿನಿಮಯಕ್ಕೆ ಹಿಂದೀ ನಾಣ್ಯಗಳೇ ಬೇಕೆಂದು ನಿರ್ಬಂಧ ಹಾಕಿವೆ. ಇದರಿಂದ ಹೈದರಾಬಾದದಲ್ಲಿ ಮೊದಲೇ ಹದಗೆಟ್ಟ ನಾಣ್ಯದ ಪರಿಸ್ಥಿತಿಯು ಇನ್ನೂ ಕೆಟ್ಟು ಹೋಗಿದೆ.

---

## ನಿಜಾಮರು ಜ್ವಾಲಾಮುಖಿಯ ದವಡೆಯಲ್ಲಿ

ಇಂಗ್ಲಂಡದ ನ್ಯೂಜ ಕ್ರಾನಿಕಲ್ ಎಂಬ ಪತ್ರಿಕೆಯಲ್ಲಿ ಹಾರ್ಕರ ಎಂಬವರು ನಿಜಾಮರು ಜ್ವಾಲಾಮುಖಿಯ ದವಡೆಯಲ್ಲಿ ಎಂಬ ಒಂದು ಲೇಖ ಬರೆದಿದ್ದಾರೆ. ಹೈದರಾಬಾದದಲ್ಲಿ ಅಧಿಕಾರವೆಲ್ಲ ಕೆಲವು ಮುಸಲ್ಮಾನ ಸ್ವಾರ್ಥಸಾಧಕರ ಕಡೆಗಿದೆ. ಪ್ರಜೆಗಳಿಂದ ಸರಕಾರಕ್ಕೆ ಅಧಿಕಾರ ದೊರೆತಿಲ್ಲ. ದಂತಕತೆಗಳಲ್ಲಿರುವಂತೆ ಅರಸನಿಂದ ಈ ಸ್ವಾರ್ಥಸಾಧಕರಿಗೆ ಅಧಿಕಾರ ದೊರೆತಿದೆ. ಆದರೆ ಈ ಬಗೆಯ ಆಡಳಿತೆಯ ವಿರುದ್ಧ ಪ್ರಚಂಡ ಶಕ್ತಿಗಳು ಎದ್ದಿವೆ. ನಿಜಾಮರು ಇನ್ನು ತಡೆಯುವದು ಕಠಿನ ಎಂದು ಮೊದಲಾಗಿ ಹಾರ್ಕರರು ಬರೆದಿದ್ದಾರೆ.

---

## ನಿಜಾಮರ ಸಿಂಹಾಸನತ್ಯಾಗ ?
### ಲಂಡನ ಪತ್ರಿಕೆಯ ವರದಿ

ಲಂಡನದ ಈವಿನಿಂಗ ನ್ಯೂಜ ಪತ್ರಿಕೆಯ ಮೊದಲನೇ ಪುಟದಲ್ಲಿ ನಿಜಾಮರ ಚಿತ್ರವನ್ನು ಪ್ರಕಟಿಸಿ ಅದರ ಬುಡದಲ್ಲಿ, ನಿಜಾಮರು ಸಿಂಹಾಸನತ್ಯಾಗಮಾಡಿ ತಮ್ಮ ಮಗನಿಗೆ ರಾಜ್ಯವನ್ನೊಪ್ಪಿಸಿ ತುರ್ಕಸ್ತಾನಕ್ಕೆ ಹೋಗಿ ವಿಶ್ರಾಂತಿ ಪಡೆಯಲಿದ್ದಾರೆಂದು ದಟ್ಟವಾದ ವಾರ್ತೆ ಲಂಡನದಲ್ಲಿ ಹಬ್ಬಿದೆ ಎಂದು ಬರೆದಿದೆ.

---

## ಪಂಢರಪೂರಕ್ಕೆ ೨೦ ಸಾವಿರ ನಿರಾಶ್ರಿತರು

ಹೈದರಾಬಾದದಿಂದ ಸುಮಾರು ೨೦ ಸಾವಿರ ಜನರು ನೆಲೆದಪ್ಪಿ ಪಂಢರಪುರಕ್ಕೆ ಬಂದಿದ್ದಾರೆ. ಇವರಲ್ಲಿ ಅನೇಕರು ಶ್ರೀಮಂತರಿರುವರು. ಇವರು ಅಪಾರ ಧನ ವ್ಯಯ ಮಾಡಿ ತಮ್ಮ ವ್ಯಾಪಾರ ಉದ್ದಿಮೆಗಳನ್ನು ಪ್ರಾರಂಭಿಸುವ ಯತ್ನದಲ್ಲಿದ್ದ ಕಾರಣ ಇಲ್ಲಿಯ ನಾಗರಿಕರಿಗೆ ಬಹಳ ವಿವಂಚನೆಯುಂಟಾಗಿದೆ. ಬಡ ನಿರಾಶ್ರಿತರಿಗೆ ನಿಲ್ಲಲು ನೆರಳು ಸಹ ದೊರೆಯುವದಿಲ್ಲ. ಇವರ ಸಹಾಯಕ್ಕಾಗಿ ಸ್ಥಾನಿಕ ಕಾಂಗ್ರೆಸ ಸಮಿತಿಯ ಅಧ್ಯಕ್ಷರಾದ ಶ್ರೀ ಅಪ್ಪಾಸಾಹೇಬ ಮಂಜುಳ ಅವರ ಅಧ್ಯಕ್ಷತೆಯಲ್ಲಿ ಒಂದು ಸಮಿತಿಯನ್ನು ನಿರ್ಮಿಸಲಾಗಿದೆ.

---

ಇಪಿ ಫಕೀರರು ತಮ್ಮ ರಾಜಕೀಯ ವಿರೋಧಿಗಳಿಂದ ಕೊಲೆ ಮಾಡಲ್ಪಟ್ಟಿರುವರೆಂದು ನಂಬಲು ಸಾಕಷ್ಟು ಆಧಾರಗಳು ದೊರೆತಿವೆಯೆಂದು ಹಿಂದು ಪತ್ರಿಕೆಯ ಪೇಶಾವರ ಸುದ್ದಿಗಾರನು ಬರೆಯುತ್ತಾನೆ.

Reg. No. B. 3148

LICENCE No. 3
Licenced to Post without Prepayment

KARMAVEER 12-7-48

# ನಾರದ ಭವಿಷ್ಯ

ಜ್ಯೋತಿಷಿ—ಕೃಷ್ಣಶಾಸ್ತ್ರಿ ಘಡೆ, ಭವಿಷ್ಯಕಥನ ಆಫೀಸ ಖಡೇಬಝಾರ, ಬೆಳಗಾವಿ.

## ಜುಲೈ ೧೨ ರಿಂದ ೧೮ ರ ವರೆಗೆ

### ಮೇಷ

ಪ್ರಕೃತಿಗೆ ಪಿತ್ತ ಇಲ್ಲವೆ ಅಜೀರ್ಣದಿಂದ ಬಹಳ ಕ್ಲೇಶ ಆದರುತೆಯೋ ನೋಕರ ಚಾಕರಿಗಳಲ್ಲಿ ಕೆಲ ಜನರಿಗೆ ಬೇರೆ ಬೇರೆ ಕಾಯಿಲೆ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಉತ್ತಮ. ಉದ್ಯೋಗದಲ್ಲಿ ಪ್ರಗತಿ ಸಾಮಾನ್ಯ ಆದರೆ ಪ್ರತಿಷ್ಠೆ ಮತ್ತು ಲಾಭ ಅದಕ್ಕಿಂತ ಅನುಕೂಲ. ಬುದ್ಧಿವಂತರೊಡನೆ ಹೊಸ ಪರಿಚಯ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಡಂಬಡಿಕೆಯ ಸಂಭವ. ಮಿತ್ರರಿಗಿಂತ ಶತ್ರುಗಳ ಬಗ್ಗೆಯೇ ಹೆಚ್ಚು ಪ್ರೇಮವೆನಿಸುವ ಕೆಲ ಪ್ರಸಂಗಗಳು. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರವು ಹೆಚ್ಚು ಅನುಕೂಲ. ಅಶ್ವಿನಿಯ ಕೊನೆಯ ೩ ಮತ್ತು ಭರಣಿಯ ಮೊದಲನೇ ೩ ಚರಣಗಳಿಗೆ ತೊಂದರೆ ಕಡಿಮೆ. ತಾ. ೧೫, ೧೭, ೧೮ ಅನುಕೂಲ.

### ವೃಷಭ

ಪ್ರಕೃತಿ ಮತ್ತು ಸ್ತ್ರೀಸುಖ ಬಹಳ ಉತ್ತಮ. ಮಕ್ಕಳಲ್ಲಿ ಒಬ್ಬರಿಂದ ಬಹಳ ತೊಂದರೆ. ಆದರೆ ಇತರರಿಂದ ಒಳ್ಳೇ ಸುಖ. ಪ್ರಿಯ ಜನರ ಸಹವಾಸ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭವೂ ಬಹಳ ಉತ್ತಮ. ಮಿತ್ರ ಸುಖ ಅನುಕೂಲ. ಬೌದ್ಧಿಕ ಕೆಲಸದಲ್ಲಿ ಬಹಳ ಯಶಸ್ಸು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ವಿಜಯ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಕೃತ್ತಿಕೆಯ ಕೊನೆಯ ೩ ಮತ್ತು ರೋಹಿಣಿಯ ಮೊದಲನೇ ೩ ಚರಣಗಳಿಗೆ ತೊಂದರೆಯಿಂದಲೇ ಯಶಸ್ಸು. ತಾ. ೧೨, ೧೪, ೧೬, ೧೭ ಅನುಕೂಲ.

### ಮಿಥುನ

ನಿಮ್ಮ ಪ್ರಕೃತಿ ಅನುಕೂಲ ಆದರೆ ಹೆಂಡತಿಗೆ ಕಾಯಿಲೆ ಇಲ್ಲವೆ ಅವಳ ದೂರತ್ವ. ಮಕ್ಕಳಲ್ಲಿ ಒಬ್ಬರಿಂದ ಗೈರವರ್ತನ ಆದರೆ ಇತರರಿಂದ ಆನಂದ ಬಹಳ ಶಿಸ್ತಿನದು. ಉದ್ಯೋಗದಲ್ಲಿ ಉತ್ತಮ ಪ್ರಗತಿ ಮತ್ತು ತುಂಬ ಲಾಭ. ಆದರೆ ಪ್ರತಿಯೊಂದು ಮಾತು ಆಗುವ ವರೆಗೆ ಬಿಕ್ಕಟ್ಟ ತೊಂದರೆಗಳನ್ನು ಸಹಿಸಲೇಬೇಕಾದ ಪ್ರಸಂಗ. ಪ್ರತಿಷ್ಠೆ ಸಾಮಾನ್ಯ ಸ್ಥಾವರದಲ್ಲಿ ಕೆಲ ಹೆಚ್ಚಳ ಇಲ್ಲವೆ ಸುಧಾರಣೆ. ಮಿತ್ರರಿಂದ ಸಹಾಯ ಅನುಕೂಲ. ಆದರೆ ಮಾತುಗಳು ಮಾತ್ರ ಉಪಹಾಸಕರ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಪ್ರತಿಕೂಲತೆ. ಪ್ರವಾಸಕ್ಕಿಂತ ಭೆಟ್ಟಿ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಆರಿದ್ರೆಯ ಕೊನೆಯ ೩ ಮತ್ತು ಪುನರ್ವಸುವಿನ ಮೊದಲನೆ ೩ ಚರಣಗಳಿಗೆ ತೊಂದರೆ ಕಡಿಮೆ. ತಾ. ೧೫, ೧೫, ೧೮, ಅನುಕೂಲ.

### ಕರ್ಕ

ಎಲ್ಲರ ಪ್ರಕೃತಿ ಅನುಕೂಲ. ಆದರೆ ನಿಮ್ಮಲ್ಲಿ ತೀವ್ರವಾದ ಭೇದ ಪ್ರತಿಯೊಬ್ಬರು ಮಿತಿ ಮೀರಿ ಬೆಚ್ಚ ಮಾಡುವರು. ಮನೆಮುರುಕ ಅತಿಥಿಗಳ ಸಹವಾಸ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಅನುಕೂಲ. ಆದರೆ ವೆಚ್ಚ ವಿಪರೀತ. ಭಾರೀ ಉತ್ಕರ್ಷದ ಕೆಲ ಹೊಸ ಯೋಜನೆಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉಭಯ ಪಕ್ಷಗಳಲ್ಲಿ ಸಮಾನ ಸ್ಥಿತಿ. ಮಿತ್ರರಲ್ಲಿ ವಿರೋಧ. ಪ್ರವಾಸ ಉತ್ತಮ ಭೆಟ್ಟಿ ಸೂಕ್ಷ್ಮ. ಆದರೆ ಪತ್ರವ್ಯವಹಾರ ಅಹಿತಕರ. ಪುಷ್ಯದ ಕೊನೆಯ ೩ ಮತ್ತು ಆಶ್ಲೇಷದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ ೧೨—೧೪—೧೬.೧೭ ಅನುಕೂಲ.

### ಸಿಂಹ

ಪ್ರಕೃತಿ ಅನುಕೂಲ. ಆದರೆ ಕೆಮ್ಮು ಬರುವ ಸಂಭವ. ಹೆಂಡತಿಗೂಡ ಸ್ವಲ್ಪ ವಿರೋಧ. ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಅನುಕೂಲ. ಮಕ್ಕಳಲ್ಲಿ ಒಬ್ಬರ ದುಃಸಹ ವಿರಹವಾಗುವ ಸಂಭವ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ ಬಹಳ ಉತ್ತಮ. ಆದರೆ ವೆಚ್ಚ ವಿಪರೀತವಾದದ್ದು. ಮತ್ತು ಸ್ಪರ್ಧೆಯಲ್ಲಿ ಶತ್ರುಗಳು ಒಡಂಬಡಿಕೆ ಮಾಡಿಕೊಳ್ಳುವ ಬಗ್ಗೆ ಉತ್ಸುಕರಾಗುವರು. ಪ್ರವಾಸ ತೊಂದರೆಯದು ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಉತ್ತಮ. ಮಘಾದ ಕೊನೆಯ ೩ ಮತ್ತು ಪೂರ್ವಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ ೧೨.೧೪.೧೫.೧೫ ಅನುಕೂಲ.

### ಕನ್ಯಾ

ಪ್ರಕೃತಿ ಉತ್ತಮ ಸ್ತ್ರೀಸುಖ ಅನುಕೂಲ ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ತೊಂದರೆ ವಿಪರೀತ. ಪ್ರತಿಯೊಂದು ಸಣ್ಣ ದೊಡ್ಡ ವಿಷಯಗಳಲ್ಲಿ ಭಿನ್ನಾಭಿಪ್ರಾಯ. ಉದ್ಯೋಗದಲ್ಲಿ ಪ್ರಗತಿ ಪ್ರತಿಷ್ಠೆ ಮತ್ತು ಲಾಭ. ಬಹಳ ಉತ್ತಮ. ಸ್ವಪ್ನ ಭಾವೀಸೂಚಕ ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಬಹಳ ಆಯಶಸ್ಸು ಮಕ್ಕಳಲ್ಲಿ ಬಹಳ ಉನ್ನತಿ. ಪ್ರವಾಸಾದಿ ಕೆಲಸ ಹಿತದ್ದು. ಉತ್ತರಾದ ಕೊನೆಯ ೩ ಮತ್ತು ಹಸ್ತಾದ ಮೊದಲನೆ ೩ ಚರಣಗಳಿಗೆ ತೊಂದರೆಯಿಂದಲೆ ಯಶಸ್ಸು. ತಾ. ೧೨, ೧೪, ೧೫, ೧೫, ಅನುಕೂಲ.

### ತುಲಾ

ನಿಮ್ಮ ಪ್ರಕೃತಿ ಅನುಕೂಲ ಆದರೆ ಹೆಂಡತಿಗೆ ಕಾಯಿಲೆ. ಉದ್ಯೋಗದಲ್ಲಿ ಪ್ರಗತಿ ಮತ್ತು ಲಾಭ ಉತ್ತಮ. ಆದರೆ ಪ್ರತಿಷ್ಠೆಗೆ ಮಾತ್ರ ಕುಂದು. ವಾದದಲ್ಲಿಮತ್ತು ಸ್ಪರ್ಧೆಯಲ್ಲಿಹಿಮ್ಮೆಟ್ಟುವದು ಮಿತ್ರಸುಖ ಉತ್ತಮ ವೆಚ್ಚ ಹೆಚ್ಚು ಆದರೆ ಅದರಲ್ಲಿಯ ಬಹುತರ ಹೇತು ಸಾಧ್ಯ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಸ್ವಾತಿಯ ಕೊನೆಯ ೩ ಮತ್ತು ವಿಶಾಖಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಿಮೆ. ತಾ. ೧೫, ೧೬, ೧೭ ಅನುಕೂಲ.

### ವೃಶ್ಚಿಕ

ಪ್ರಕೃತಿ ಉತ್ತಮ. ಸ್ತ್ರೀ ಸುಖ ಕಡಮೆ. ಆದರೆ ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸಮಾಧಾನ ಬಹಳ ಉತ್ತಮ, ಉದ್ಯೋಗದಲ್ಲಿ ಒಳ್ಳೇ ಪ್ರಗತಿ ಉತ್ತಮ ಲಾಭ. ಅವಚಿತ ಲಾಭವೂ ಸಂಭವ. ಆದರೆ ಪ್ರತಿಷ್ಠೆಯ ದೃಷ್ಟಿಯಿಂದ ಕುಂದು ಬರುವಂತಹ ಬಹಳ ಘಟನೆಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಶತ್ರುಗಳು ಹಿಮ್ಮೆಡುವದು. ಆದರೆ ಸ್ವತಃಕ್ಕೂ ಯಶಸ್ಸು ಕಡಮೆ. ಭೆಟ್ಟಿಗಿಂತ ಪ್ರವಾಸ ಮತ್ತು ಪತ್ರವ್ಯವಹಾರ ಹೆಚ್ಚು ಅನುಕೂಲ. ಅನುರಾಧೆಯ ಕೊನೆಯ ೩ ಮತ್ತು ಜ್ಯೇಷ್ಠಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೧೨, ೧೪, ೧೬, ೧೮ ಅನುಕೂಲ.

### ಧನು

ಪ್ರಕೃತಿಗೆ ಅಸ್ವಸ್ಥತೆ ಹೆಂಡತಿ ಗೂಡ ಮೇಲಿಂದ ಮೇಲೆ ವಿರೋಧ ಮಕ್ಕಳಿಂದ ಕಿರಾಣಿಕೆಯ ವರ್ತನೆ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಮಾನ್ಯ ಅನುಕೂಲ. ಉದ್ಯೋಗದಲ್ಲಿ ಉತ್ತಮ ಲಾಭ ಒಳ್ಳೇ ಪ್ರತಿಷ್ಠೆ ಆದರೆ ಪ್ರಗತಿಯಲ್ಲಿ ಸ್ವಲ್ಪ ಅಡಚಣಿಗಳು. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು ಸ್ಥಾವರದಲ್ಲಿ ಸ್ವಲ್ಪ ಹಾನಿ ಪ್ರವಾಸ ತೊಂದರೆಯದು. ಆದರೆ ಭೆಟ್ಟಿ ಮತ್ತು ಪತ್ರವ್ಯವಹಾರ ಉತ್ತಮ. ಮೂಲಾದ ಕೊನೆಯ ೩ ಮತ್ತು ಪೂರ್ವಾಷಾಢಾದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ. ತಾ. ೧೩, ೧೪, ೧೫, ೧೫ ಅನುಕೂಲ.

### ಮಕರ

ಪ್ರಕೃತಿ ಮತ್ತು ಸ್ತ್ರೀ ಸುಖ ಅನುಕೂಲ. ಆದರೆ ಮಕ್ಕಳಿಂದ ಕೆಲ ತೊಂದರೆಯ ಸಂಗತಿಗಳು. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಮಾನ್ಯ. ಉದ್ಯೋಗದಲ್ಲಿ ಪ್ರಗತಿ ಮತ್ತು ಪ್ರತಿಷ್ಠೆ ಸಾಧಾರಣವೆ. ಆದರೆ ಲಾಭ ತುಂಬ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಉತ್ತಮ ಯಶಸ್ಸು. ಮಿತ್ರಸುಖ ಉತ್ತಮ. ಸ್ಥಾವರದಲ್ಲಿ ಹೆಚ್ಚಳ. ಪ್ರವಾಸಾದಿ ಕೆಲಸ ಕಷ್ಟದ್ದು. ಉತ್ತರಾಷಾಢಾದ ಕೊನೆಯ ೩ ಮತ್ತು ಶ್ರವಣದ ಮೊದಲನೆ ೩ ಚರಣಗಳಿಗೆ ಬಹಳ ತೊಂದರೆ. ತಾ. ೧೨, ೧೪, ೧೬, ೧೭ ಅನುಕೂಲ.

### ಕುಂಭ

ಪ್ರಕೃತಿಗೆ ಕಿರಕುಳ ಕ್ಲೇಶ. ಬಂಧುವರ್ಗದವರಿಗೆ ಕೆಲವುಟ್ಟಿಗೆ ದುಃಖದ ಸಂಭವ. ಉಳಿದ ವಿಷಯಗಳಲ್ಲಿ ಪ್ರಾಪಂಚಿಕ ಸುಖ ಸಾಮಾನ್ಯ ಅನುಕೂಲ. ಉದ್ಯೋಗದಲ್ಲಿ ಪ್ರಗತಿ ಉತ್ತಮ. ಲಾಭ ಅಂದಾಜಿನಷ್ಟು ಆದರೆ ನವಕರ ವರ್ಗದವರಿಗಿಂತ ಧಂದೆ ಮಾಡುವವರಿಗೆ ಪ್ರತಿಷ್ಠೆಯ ವಿಷಯದಲ್ಲಿ ಬಹಳ ತೊಂದರೆ. ವಾದದಲ್ಲಿ ಮತ್ತು ಸ್ಪರ್ಧೆಯಲ್ಲಿ ಒಳ್ಳೆ ಯಶಸ್ಸು ಪ್ರವಾಸ ಮತ್ತು ಭೆಟ್ಟಿಗಿಂತ ಪತ್ರವ್ಯವಹಾರ ಹೆಚ್ಚು ಅನುಕೂಲ. ಶತತಾರಿಕೆಯ ಕೊನೆಯ ೩ ಮತ್ತು ಪೂರ್ವಾ ಭಾದ್ರಪದದ ಮೊದಲನೆ ೩ ಚರಣಗಳಿಗೆ ತೊಂದರೆ ಕಡಮೆ ತಾ. ೧೫, ೧೫, ೧೬, ೧೮ ಅನುಕೂಲ.

### ಮೀನ

ಪ್ರಕೃತಿ ಮತ್ತು ಪ್ರಾಪಂಚಿಕ ಸುಖ ಉತ್ತಮ. ಆದರೆ ಅಪ್ರಿಯ ಜನರ ಸಹವಾಸ ಉದ್ಯೋಗದಲ್ಲಿ ಪ್ರಗತಿ ಉತ್ತಮ ಪ್ರತಿಷ್ಠೆ ಬಹಳ ಮತ್ತು ತುಂಬ ಲಾಭ. ಮಿತ್ರರಲ್ಲಿ ಸ್ವಲ್ಪ ವಿರೋಧ. ಸ್ಥಾವರದಲ್ಲಿ ಹೊಸ ಸುಧಾರಣೆಗಳು. ಬಹಳ ದೊಡ್ಡ ಧರ್ಮ ಕೃತ್ಯಗಳು ಮಾಡಲ್ಪಡುವ ಸಂಭವ. ವಾಹನ ಸುಖದ ಯೋಗ ಪ್ರವಾಸಾದಿ ಕೆಲಸ ಹಿತದ್ದು. ಉತ್ತರಾ ಭಾದ್ರಪದದ ಕೊನೆಯ ೩ ಮತ್ತು ರೇವತಿಯ ಮೊದಲನೇ ೩ ಚರಣಗಳಿಗೆ ಹೆಚ್ಚು ಅನುಕೂಲ. ತಾ. ೧೨, ೧೪, ೧೬, ೧೮ ಅನುಕೂಲ.

---

## ಸಾವಿತ್ರಿ—ಸತ್ಯವಾನ

(೧೫ನೆಯ ಪುಟದಿಂದ)

ಮೋಸ ಮಾಡಲು ಮಾಡಿದ ಪೋಲೀಸ್—ಪತ್ತೇದಾರಿ ಚಮತ್ಕಾರವಾಗಿರಬಹುದೇ ಎಂದು ಹೊಳೆದು ಎದೆ ಧಸಕ್ಕೆಂದಿತು. "ಇಲ್ಲೇನು? ಪೋಲೀಸರಿದ್ದಾರೆಯೇ? ಎಂದು ನಡಗುತ್ತಾ ಪಿಸುಗುಟ್ಟಿದೆ."

ಅವಳು ಹತಾಶ ಸ್ವರದಲ್ಲಿ, ಜೀವವಿಲ್ಲದವಳಂತೆ, "ಒಳ್ಳೇ ಗಂಡಾಂತರವಾಯಿತಲ್ಲ. ಪೋಲೀಸರೂ ಇಲ್ಲ; ಮಣ್ಣೂ ಇಲ್ಲ. ಕರಿಯಪ್ಪ ಕದ್ದುದು ಎಂದು ಕೋರ್ಟಿನಲ್ಲಿ ನಿರ್ಣಯವಾಯಿತು.— ಅಲ್ಲಾ! ನಿಮ್ಮಂಥ ಪಕ್ಕಾ ದರೋಡೆ ಮಾಡೀತೆಂದರೆ ಯಾರು ತಾನೇ ಸ್ವಪ್ನ ಕಂಡಾರು? ಅದರೆ, . . . ಈಗೊಂದು ದೊಡ್ಡ ಉಭಯ ಸಂಕಟವಾಯಿತಲ್ಲಾ! ಏನು ಪೇಚಾಟ! ಆ ಇನ್‌ಶೂರನ್ಸ ಹಣಕ್ಕೇನು ಮಾಡಲಿ? . ."

ನನಗೆ ಮೊದಲು ಅರ್ಥವಾಗಲಿಲ್ಲ. ಬಾಯಿ ತೆರೆದು ಕೇಳಿದೆ. "ಅಯ್ಯೋ ಇನ್ನೂ ತಿಳಿಯಲೇ ಇಲ್ಲವೆ? . . . ಆ ಇನ್‌ಶೂರೆನ್ಸಿನ ೧೦,೦೦೦ ರೂಪಾಯಿ ನಾನು ತೆಗೆದುಕೊಂಡೆ, ನೀವು ಸಾಯಲಿಲ್ಲ, ಎಂದು ನನಗೇನು ಕನಸು ಕಟ್ಟಿತ್ತೇ! ಆ ಹೆಣಾನೂ . . . ನಿಮ್ಮ ಹಾಗೇನೇ ಕಂಡಿತು. ಅಯ್ಯೋ ಭಗವಂತಾ. ಈಗೇನು ಮಾಡೋದಪ್ಪಾ! ಆ ಹತ್ತು ಸಾವಿರದಿಂದ ಮನೇ ಹಿತ್ತಿಲು ಕೊಂಡು ಕೊಂಡು ಬಾಡಿಗೇ ಮೇಲೆ, ಸುಖವಾಗಿ ಬದುಕಿದ್ದೆನಲ್ಲಾ. ! . . ."

"ನಾನು ಒಂದು ನಿಮಿಷ, ಮಂತ್ರ ಬಡಿದವನ ಹಾಗೆ, ಕಲ್ಲಾಗಿ ನಿಂತೆ. ಮತ್ತೆ ಅವಳನ್ನೇ ದಿಟ್ಟಿಸಿ ನೋಡಿದೆ . . . ಪರವಾಯಿಲ್ಲ. ಒಳ್ಳೇ ನಾಜೂಕಿನ ಸೀರೆಯನ್ನೇ ಉಟ್ಟಿದ್ದಳು. ಕಿವಿಯಲ್ಲಿ ಥಳ ಥಳಿಸೋ ಬೆಂಡೋಲೇನೂ ಇತ್ತು. ಹಣೆಯಲ್ಲೊಂದು ಕುಂಕುಮದ ಕಳೆಯಿರುತ್ತಿದ್ದರೆ ಸಾಕ್ಷಾತ್ತು ಲಕ್ಷ್ಮೀದೇವಿ . . . ಇನ್ನು . . . ಇದನ್ನೆಲ್ಲಾ ಮಾರಿ, ಇನ್‌ಶೂರನ್ಸ್ ಹಣ ಹಿಂದೆ ಮುಟ್ಟಿಸುವುದೇ? . . . ಆ ಹೊಟ್ಟೆ ಬಿಗಿದು. ಹರಕು ಪಂಚೆಯನ್ನುಟ್ಟು ಮುಂದಾಲೋಚನೆಯಿಂದ ಕಂತು ಕಂತಿಗೆ ತಪ್ಪದೆ, ಕಟ್ಟಿದ ಇನ್‌ಶೂರೆನ್ಸ್ ಪ್ರಿಮಿಯಂನ ಮಹಾತ್ಮ್ಯ. ಅದರ ನೆನಪೇ ನನಗಿದ್ದಿರಲಿಲ್ಲ . . . ಈಗ, ಅವಳ ಕಣ್ಣಿನಲ್ಲಿ ಮೂಕ ಪ್ರಾರ್ಥನೆಯಿತ್ತು . . . ಪುನಃ ಎಲ್ಲಾ ದಕ್ಕೂ ಎಳ್ಳು ನೀರು ಕೊಟ್ಟು . . . ಹೊಸ ವೈಭವ ಎಲ್ಲಾ ಮಾರಿ, ಹರಕುಚಿಂದಿಗೆ ಮರಳುವುದೇ. . . ಅಯ್ಯೋ ಏಕೆ ಈ ಪ್ರಾಣಿಗೆ ಸಂಕಟ ಕೊಡಲಿ? ಅದರ ಮುಖದಲ್ಲಿ ವಿಷ ಹಾಕಲಿ! ಎಂದಕೊಂಡೆ.

"ಏನೂ ಬೆದರ ಬೇಡ. ಸುಮ್ಮನೆ ನೋಡಿಕೊಂಡು ಹೋಗೋಣಾ ಅಂತ ಬಂದೆ. ಮಕ್ಕಳು, ನೀನು ಸುಖವಾಗಿದ್ದೀರಾಂತ, ನೋಡೋಣಾ ಅಂತಾ ಇದ್ದೆ. ಸುಖವಾಗಿದ್ದೀರಷ್ಟೇ, ಅಷ್ಟೇ ಸಾಕು. ಸಂತೋಷ. ನಾನು ಸನ್ಯಾಸಿಯಾಗಿದ್ದೇನೆ- ದೇಶಾಂತರ ಸಂಚಾರ ಮಾಡುತ್ತಿದ್ದೇನೆ. ಕಾಣುವುದಿಲ್ಲವೇ ನನ್ನ ವೇಷ—ಸ್ವರೂಪ?—ಬೆದರಬೇಡ— ದೇವರು ಒಳ್ಳೇದು ಮಾಡಲಿ. ಎಂದು ಬಹಳ ನಯವಾಗಿ ಹೇಳಿ ಕನಸಿನಲ್ಲಿದ್ದವನಂತೆ ಹೊರಗೆ ನಡೆದು ಬಂದೆ"

"ಇಲ್ಲಿಗೋ? . . . ಮತ್ತೆ? ಓ! ಇದಕ್ಕೇನೇ 'ಸತ್ತು ಹೋದೆ' ಎಂದದ್ದು? . ಮತ್ತೆ?

"ಮತ್ತೆ! ಕಾಣುವುದಿಲ್ಲವೆ?"



ಈ ಪತ್ರಿಕೆಯು ಹುಬ್ಬಳ್ಳಿಯ ಸಂಯುಕ್ತ ಕರ್ನಾಟಕ ಮುದ್ರಣಾಲಯದಲ್ಲಿ "ಲೋಕಶಿಕ್ಷಣ ಟ್ರಸ್ಟಿನ" ಪರವಾಗಿ ಹ. ರಾ. ಪುರೋಹಿತರಿಂದ ಮುದ್ರಿಸಿ ಪ್ರಕಟವಾಯಿತು.